ಶ್ರೀಃ

—೦—

ಶ್ರೀಮದಖಿಲ ಜಗತ್ಕಾರಣಮೂರ್ತಿಯಾದ ಶ್ರೀಯಾದಗಿರಿನಿಲಯ

ಶ್ರೀಮನ್ನಾರಾಯಣನ ದಿವ್ಯ ವೈಭವಪ್ರಕಾಶಕವಾದ

ಶ್ರೀಮನ್ನಾರದೀಯ

ಪುರಾಣಾಂತರ್ಗತವಾದ

# ಶ್ರೀಮದ್ಯಾದವಗಿರಿ ಮಾಹಾತ್ಮ್ಯವು.

ಎಂಬೀಗ್ರಂಥವು

ಸಕಲಜನ ಸೌಲಭ್ಯಕ್ಕಾಗಿ ಕನ್ನಡದಲ್ಲಿ ವಿರಚಿಸಲ್ಪಟ್ಟು

ಶ್ರೀಯದುಗಿರಿ ಸದಾನಂದವರ್ಧಿನಿ ಸಭಿಕರಿಂದ

ಅನುಮೋದಿಸಲ್ಪಟ್ಟು,

ಮೇಲುಕೋಟೆ

ಶ್ರೀ ಸದಾನಂದ ಮುದ್ರಾಕ್ಷರಶಾಲೆಯೊಳ್

ಮುದ್ರಿಸಿ ಪ್ರಕಟಿಸಲ್ಪಟ್ಟಿತು.

1895



ಕ್ರಯ ೧೨—ಆಣೆ

ಶ್ರೀಃ



# ನಾರದೀಯ ಪುರಾಣಾಂತರ್ಗತವಾದ ಕರ್ಣಾಟಕ ಯಾದವಗಿರಿ ಮಹಾತ್ಮ್ಯವು.

— ಶ್ರೀಯೈನಮಃ —

ಕಂ॥ ದೇವನಜಜನಕ ಧರಣೀಸುತಾವಲ್ಲಭ ರಾಮಕೃಷ್ಣಯತಿಪತಿಕರಸಂ ।
ಭಾವಿತಪದಕಮಲಲಸ ಲಕ್ಷ್ಮೀವಸತಿ ಸತತಮೀಗೆ ಸನ್ಮಂಗಳವಂ ॥

ಅವತಾರಿಕೆಯು.

ಶ್ರೀಯಃಪತಿಯಾಗಿ, ಅವಾಪ್ತಸಮಸ್ತಕಾಮನಾಗಿ, ಸಮಸ್ತ ಕಲ್ಯಾಣಗುಣಗಣಪರಿಪೂರ್ಣನಾದ ಶ್ರೀಮನ್ನಾರಾಯಣನು ಬ್ರಹ್ಮರುದ್ರಾದಿ ದೇವತೆಗಳಿಗು ವಾಙ್ಮನಸಗೋಚರವೆನಿಸುವ ಶ್ರೀವೈಕುಂಠದಲ್ಲಿ ಅನಂತಗರುಡ ವಿಷ್ವಕ್ಸೇನಾದಿ ನಿತ್ಯಸೂರಿಗಳಿಂದಲೂ, ಪರಾಂಕುಶ ಪರಕಾಲಯತಿ ವರಾದಿ ನಿತ್ಯಮುಕ್ತರಿಂದಲೂ, ಪರಿಚರ್ಯಮಾಣನಾಗಿ, ಶ್ರೀಭೂಮಿ ನೀಳಾದಿ ದಿವ್ಯಮಹಿಷಿಯರ ದಿವ್ಯಲೀಲೆಯಿಂದೊಡಗೂಡಿ, ದಿವ್ಯಭೋಗದಲ್ಲಿರಲು, ಅನಿತ್ಯಸಂಸಾರಿಗಳಿಂತೆ ತನ್ನ ಕೈಂಕರ್ಯವಂ ಮಾಡಿ, ನಿರತಿಶಯಾನಂದವನ್ನನುಭವಿಸಿ ಬಾಳುವುದಕ್ಕೆ ಯೋಗ್ಯತೆಯುಂಟಾಗಿದ್ದಾಗ್ಯೂ, ಅದನ್ನರಿಯದೆ ಕರ್ಮಪರವಶರಾಗಿ, ಚೇತನರಾದಾಗ್ಯೂ ಅಚೇತನ ಪ್ರಾಯರಾಗಿ, ದುಃಖಪಡುವುದಂ ಕಂಡು, "ಪುತ್ರನ ಆಪತ್ತಂ ನೋಡಿ ತಂದೆಯು ವ್ಯಸನಪಡುವಂತೆ,, ತಾನೂ ದುಃಖಿತನಾಗಿ 'ಇವರುಗಳು ತನ್ನ ಸೇವೆಯಿಂದ ಬದುಕಲೆಂದು,, ಕರಣಕಳೇಬರಗಳನ್ನು ಕರುಣಿಸಿ ಕೊಡಲವರದಂ,, ಕೊಂಡು ಶತ್ರುವಧಕ್ಕೋಸ್ಕರ ಕೊಟ್ಟ ಕತ್ತಿಯಿಂದ ತಮ್ಮ ಕೊರಳಂ ಕೊಯ್ದುಕೊಳ್ಳುವರಂತೆಯೂ, ಕಂಟಕೋದ್ಧಾರಾರ್ಥವಾಗಿ ಕೊಟ್ಟ ಸೂಜಿಯಿಂದ ಕಣ್ಣಂ ತೋಡಿಸಿಕೊಳ್ಳುವರೋಪಾದಿಯಲ್ಲಿಯೂ, ಅನಾದಿಕಾಲದಭ್ಯಾಸದಿಂ ಬಂದ ಪಾಪಕರ್ಮಗಳಲ್ಲಿಯೇ ನಿರತರಾಗಿ ಅಜ್ಞಾನದಿಂ ಕೆಡುವುದಂ ಕಂಡು ಕತ್ತಲೆಮನೆಯಲ್ಲಿ ದೀಪವಂ ತೋರಿಸುವಂತೆ ಸದಸದ್ವಿವೇಕವಂ ತ್ಯಾಜ್ಯೋಪಾದೇಯ ವಿಭಾಗಜ್ಞಾನವಂ ವೇದ —

ಡುವದಕ್ಕೋಸ್ಕರ ವೇದಶಾಸ್ತ್ರಪುರಾಣಾದಿಗಳು ತಿಳಿಯಲಾಗಿ ಅವುಗಳಂ ಅತಿವಿಸ್ತಾರವಾಗಿ ಮುಂದಿನವರಿಗೆ ತಿಳಿಯಲಸಾಧ್ಯವಾಗಿರುವುದನರಿತು, "ಶಾಸನಪತ್ರದಿಂದಾಜ್ಞೆಯಂ ನಡೆಸದಿರುವ ದುರ್ಮಾರ್ಗ ಪ್ರಜೆಗಳನ್ನು ತಾನೇ ಬಂದು ಶಿಕ್ಷಿಸುವ ರಾಜನಂತೆ,, ಲೀಲಾವಿಭೂತಿಗೆ ಬಂದು, ಉತ್ತರಬದರಿಕಾಶ್ರಮದಲ್ಲಿ ನರನಾರಾಯಣಾವತಾರಮಂ ಮಾಡಿ, ಶಿಷ್ಯಾಚಾರ್ಯಕ್ರಮವಂ ತೋರಿಸಿ, ಸಕಲವೇದಸಾರವಾದ ಮೂಲಮಂತ್ರವಂ ಬಷ್ಟಾಕ್ಷರವ ನುಪದೇಶಿಸಿದನು —

ಅದು ಮಿತಾಕ್ಷರವಾಗಿ ಅಮಿತಾರ್ಥವಾಗಿ ಇದ್ದದ್ದರಿಂದ ಅದನರಿಯುವುದಸಾಧ್ಯವೆಂದಾಲೋಚಿಸಿ, ತದ್ವ್ಯಾಖ್ಯಾನ ರೂಪವಾದ ಶ್ರೀಮದ್ಭಾಗವತಗಿರಿ ಮಹಾತ್ಮ್ಯವಂ ನಾರದೀಯ ಪುರಾಣ ಮುಖದಿಂ ವಿಸ್ತರಿಸಿದನದೆಂತೆನೆ,

ಕೃತತ್ರೇತಾದ್ವಾಪರ ಯುಗಗಳು ಕಳೆದು, ಕಲಿಯುಗಾರಂಭದ ಲ್ಲೊಂದುದಿನದಲ್ಲಿ ಸಕಲವೇದಾರ್ಥ ತತ್ವಜ್ಞರಾಗಿ, ಭಗವದೈಕಪರಾಯಣರಾಗಿ, ತಪೋನಿಷ್ಠರಾಗಿರುವ ವ್ಯಾಸರು, ವಸಿಷ್ಠರು, ಕಪಿಲಮಾರ್ಕಂಡೇಯ ಕಾಶ್ಯಪರುಗಳೂ, ಅತ್ರಿದಕ್ಷವಿಶ್ವಾಮಿತ್ರಭರದ್ವಾಜರುಗಳೂ, ಶೌನಕ ಗೌತಮ ಜಮದಗ್ನಿಗಳೂ, ಪುಲಸ್ತ್ಯಾಗಸ್ತ್ಯವಾಲ್ಮೀಕಿ ವಾಮದೇವಾದಿಗಳೂ ಮತ್ತಂ ಸಮಸ್ತ ಋಷಿಗಳೊಂದುಗೂಡಿ ಬದರಿಕಾಶ್ರಮಕ್ಕೆ ಬಂದು ಮುನಿರೂಪದಿಂ ತಪೋನಿಷ್ಠರಾದ ನರನಾರಾಯಣ ಸ್ವಾಮಿಯವರಿಗೆ ಸಾಷ್ಟಾಂಗ ನಮಸ್ಕಾರವಂ ಮಾಡಿ ಕೈಮುಗಿದು ಪೊಗಳುತಿಂತೆಂದರು.

ಎಲೈ ದೇವದೇವೋತ್ತಮನಾದ ಸೃಷ್ಟಿಸ್ಥಿತಿ ಸಂಹಾರಕರ್ತನಾದ ಜಗತ್ಕಾರಣನಾದ ನಾರಾಯಣನೇ, ನಿನಗೆ ದಾಸಭೂತರಾದ ಸಮಸ್ತ ಜೀವಾತ್ಮರಂ ನೀನು ತಾಯಿತಂದೆಗಳಿಗಿಂತತಿಶಯವಾಗಿ ವಾತ್ಸಲ್ಯದಿಂ ರಕ್ಷಿಸುವಿ. ನಿನ್ನ ಚರಣಾರವಿಂದವಂ ಶರಣವೆಂದೆಣಿಸುವ ಚೇತನರಿಗೆ ಸಂಸಾರವೆಂಬ ಕಾಳ್ಕಿಚ್ಚಿನ ಸಂತಾಪಗಳಂ ನಿರವಧಿಕಕರುಣಾರಸವೆಂಬ ಮೃತಧಾರಾವರ್ಷದಿಂದ ಶಮನವಂ ಮಾಡಿ ನಿತ್ಯಸೂರಿಗಳಿಗೆ ಭೋಗ್ಯವಾದ ಮೋಕ್ಷಾನಂದವಂ ಕೊಟ್ಟು ಸಲಹುವೈ ಅದಕಾರಣದಿಂ ನಿನ್ನ ಚರಣಾರವಿಂದದಲ್ಲಿ ಪರಮ ಭಕ್ತಿಯಂ ಮಾಡುವ ನಮ್ಮಗಳಿಗನಾದಿ ಕಾಲದಿಂದುಂಟಾದ ಪಾಪರಾಶಿಗಳಂ ತೂಲರಾಶಿಗಳ ನಗ್ನಿಯೋಪಾದಿಯಲ್ಲಿ ದಹಿಸಿ ಕರ್ಪೂರಾಸಾರ ಶೀತಳವಾದ ಅಪಾಂಗಗಳಿಂ ಕಟಾಕ್ಷಿಸಿ ರಕ್ಷಿಸಬೇಕೆಂದು ಸ್ತೋತ್ರವಂ ಮಾಡಿದರು.

ಈ ಪ್ರಕಾರವಾಗಿ ವ್ಯಾಸಾದಿ ಮಹಾಮುನಿಗಳ ಸ್ತೋತ್ರವಂ ಕೇಳಿ ಪರಮಕಾರುಣಿಕರಾದ ನಾರಾಯಣನು ಪರಮ ಸಂತೋಷಯುಕ್ತನಾಗಿ ಮಧುರ ವಚನಗಳಿಂ ಮುನಿಗಳಂ ಕುರಿತಿಂತೆಂದನು

ಎಲೈ ಋಷಿಗಳಿರಾ ಸುಖವಾಗಿ ಬಂದಿರ್ರೆ? ಈ ನಮ್ಮಾಶ್ರಮವು ನಿಮಗೆ ಸುಖವಸತಿಯಾಗಿರುವುದೆ, ನಿಮ್ಮ ಸಂದರ್ಶನದಿಂ ನಾನು ಬಹಳವಾಗಿ ಸಂತೋಷಿಸುವೆನು ನನಗೆ ಜ್ಞಾನಿಗಳೇ ಆತ್ಮಸದೃಶರಾಗಿರುವದರಿಂದ ನಿಮ್ಮಂಥ ಭಕ್ತರುಗಳ ಸಮಾಗಮಕ್ಕಿಂತಲೂ, ಹೆಚ್ಚಾದ ಲಾಭವು ನನಗೆ ಯಾವದೊಂದಿಲ್ಲವಾಗಿ ನೀವುಗಳೆಲ್ಲರುಂ ಏಕಮನಸ್ಕರಾಗಿ ಕೇಳಿ ತುಹಿನಗಹನವಾಗಿ ಪ್ರಿಯದ[illegible]ವಕ್ಕೆನು ಕಾರ್ಯಾರ್ಥ

ಕ್ಷೇತ್ರವು ತ್ಯಾಗಾಭಿಮತವಾಗಿಪ್ಪುದು. ಲೋಕದೊಳ್ ಚೇತನರು, ಸಾತ್ವಿಕರೆಂದೂ, ರಾಜಸರೆಂದೂ ತಾಮಸರೆಂದೂ, ಮೂರು ತೆರನಾಗಿರ್ಪರು. ಆ ನಾರಾಯಣಾದ್ರಿಯೊಳ್ ನಿತ್ಯವಾಸಂಗೆಯ್ವರ್ಗೆ ರಜೋಗುಣಮುಂ ಪೊರ್ದಲರಿಯದಾಗಿ ತಮೋಗುಣಮೆಂತು ಪೊರ್ದುದು? ಮತ್ತು ಮಾ ಪರ್ವತಂ ನನಗೆ ಹೃದಯದಂತೆ ಅಂತರಂಗವಾಗಿಯುಂ ವೇದಗಳಿಗೆ ನಯನದಂತೆ ಪ್ರಕಾಶಕವಾಗಿಯುಂ ತಪೋನಿಷ್ಠರಾದ ಋಷಿಗಳ್ಗೆ ಸರ್ವಸ್ವಾಧಿಯಂತು ಪಾದೇಯವಾಗಿಯುಂ ಮುಕ್ತಿಲತೆಗೆ ಪೊಳಕೆಯಂತಭಿವರ್ಧಕವಾಗಿಯುಂ ಇರುವದರಿಂ ನನಗಾ ನಾರಾಯಣಾದ್ರಿಯೊಳ್ ಶ್ರೀರಂಗ ವೇಂಕಟಾಚಲ ಹಸ್ತಿಗಿರಿ ಕ್ಷೀರಾಬ್ಧಿ ವಿಷ್ಣುಲೋಕಾದಿಗಳೊಳ್ ಉಂಟಾದ ಪ್ರೀತಿಗಿಂತತಿಶಯವಾದ ಪ್ರೀತಿಯುಂಟಾಗಿರುವದು. ಮತ್ತು ಮಾ ಪರ್ವತದೊಳ್ ಆದಿಶೇಷನುಂ ಪ್ರತಿಯುಗಂಗಳೊಳ್ ನಿತ್ಯಸೂರಿಗಳಂ ಒಡಗೂಡಿ ನನ್ನ ಪರಿಚರಣ ಪರನಾಗಿ ಕೃತಯುಗದೊಳನಂತರೂಪದಿಂದಲುಂ ತ್ರೇತಾಯುಗದೊಳ್ ಲಕ್ಷ್ಮಣಸ್ವರೂಪದಿಂದಲುಂ ದ್ವಾಪರಯುಗದೊಳ್ ಶೇಷಾಂಶನಾದ ಬಲರಾಮನಾಗಿಯುಂ ಕಲಿಯುಗದೊಳ್ ಶೇಷಾಂಶವಾದ ಮತ್ಪಾದವಾರ ಮುಖ್ಯವನಾಗಿಯುಂ ಆರಾಧಿಸುವನು. ದ್ವಾಪರಾಂತದೊಳ್ ಯದುವಂಶ ಶಿಖಾಮಣಿಗಳಾದ ರಾಮಕೃಷ್ಣಾದಿಗಳಿಂದ ಆ ಪರ್ವತಂ ಸೇವ್ಯವಾದುದರಿಂದ ಮೊದಲಾಗಿ ಆ ನಾರಾಯಣಾದ್ರಿಗೆ ಯದುಗಿರಿಯೆಂದೂ ಯಾದವಾದ್ರಿಯೆಂದುಂ ಪ್ರಸಿದ್ಧಿಯುಂಟಾಗಿರುವುದು. ಈ ಪ್ರಕಾರವಾಗಿ ಆದಿಶೇಷನು ಅಶೇಷಕೈಂಕರ್ಯಂಗಳಂ ವಿಶೇಷವಾಗಿ ಮಾಡುವುದರಿಂದ ಆಪರ್ವತವು ಶೇಷಾತ್ಮಕವಾಗಿ ಶೇಷಶಯನನಾದ ನನಗೆ ಶ್ರೀವೈಕುಂಠಕ್ಕಿಂತಲೂ ಅತಿಶಯವಾಗಿ ಲಕ್ಷ್ಮಿಯೊಡಗೂಡಿ ವಿಹರಿಸುವದಕ್ಕೆ ಯೋಗ್ಯವಾಗಿರುವುದು. ಶ್ರೀರಂಗಾದ್ಯಷ್ಟೋತ್ತರ ಶತಸ್ಥಾನಸಾರಭೂತವಾದೀ ನಾರಾಯಣಾದ್ರಿಯಲ್ಲಿ ನನ್ನ ಸೇವೆಯಂ ಮಾಡುವವರ್ಗೆ ಸಕಲ ದಿವ್ಯಕ್ಷೇತ್ರಗಳಲ್ಲಿಯೂ ನನ್ನ ಸೇವೆಯಂ ಮಾಡಿದ ಸುಕೃತವು ಲಭಿಸುವದು. ಮತ್ತು ಮಾ ನಾರಾಯಣ ಕ್ಷೇತ್ರದಲ್ಲಿ ವೈಕುಂಠವಾಸಿಗಳಾದ ನಿತ್ಯಸೂರಿಗಳೆಲ್ಲರೂ ಪಶುಪಕ್ಷಿ ಮೃಗಾದಿರೂಪದಿಂದಲೂ ತರುಗುಲ್ಮಲತಾದಿರೂಪದಿಂದಲೂ ಅವತರಿಸುವರು. ಆ ನಾರಾಯಣಾದ್ರಿಯೊಳಿರುವ ಪಶುಪಕ್ಷಿ ಮೃಗಾದಿಗಳೂ ಮನುಜರೂ ಕೂಡ ಅವಸಾನಕಾಲದಲ್ಲಿ ಯಮಭಟರುಗಳಿಂದ ದೂರದಿಂದಲೇ ನಮಸ್ಕರಿಸಿ ಪರಿಹರಿಸಲ್ಪಡುವರು. ಆ ದಿವ್ಯದೇಶ ಯಾತ್ರೆಯಂ ಮಾಡಲನುಕೂಲವಿಲ್ಲದ ಚೇತನರಿಗೆ "ನಾನು ಯಾವಾಗ ಆ ಯಾದವಾದ್ರಿಗೆ ಪೋಗುವೆನು. ಯಾವಾಗಲಾ ನಾರಾಯಣನ ದರ್ಶನವ ಮಾಡುವೆನೋ" ಎಂಬ ಆಶೆಯುಂಟಾಗಿದ್ದರೂ ಅವರಿರುವದೇಶದೊಳ್ ಯಮಭಟರು ಯಾವಾಗಲೂ ಸಂಚಾರ ಮಾಡಲಾರರು. ಈ ಪ್ರಕಾರವಾದ ಮಹಿಮೆಯುಳ್ಳ ಆ ಪರ್ವತದಲ್ಲಿ ಬ್ರಹ್ಮಗಳ ತ್ರಿಷವಣ ಸ್ನಾನಾದಿಗಳಿಗುಪಯುಕ್ತವಾದ ಕಲ್ಯಾಣೀತೀರ್ಥವಿರುವದು. ಯಾವ ಕಲ್ಯಾಣೀತೀರ್ಥದಲ್ಲಿ ಸ್ನಾನಮಾಡುವ

ಭಾಗವತೋತ್ತಮರುಗಳಿಗೆ ಆ ತೀರ್ಥದಲ್ಲಿ ವಿಶ್ವಾಸವಿರುವದೋ ಅಂಥಾ ವಿಶ್ವಾಸವು ಪುಷ್ಕರ ತೀರ್ಥದಲ್ಲಿಯೂ, ಪ್ರಯಾಗದಲ್ಲಿಯೂ, ಗಂಗಾ ಯಮುನಾ ಸರಸ್ವತೀ ಮೊದಲಾದ ತೀರ್ಥಗಳಲ್ಲಿಯೂ ಇರಲಾರದು. ಯಾವ ಕಲ್ಯಾಣಿಯಲ್ಲಿ ಸ್ನಾನಮಾಡಿದಂಥಾವರು ಸಂಸಾರವೆಂಬ ಅಗಾಧ ಸಮುದ್ರ ಮಧ್ಯದಲ್ಲಿ ಮುಳುಗಿ ಯಿದ್ದಾಗ್ಯೂ ಅದರಿಂದುತ್ತೀರ್ಣರಾಗುವರು. ಸಕಲ ಜಗತ್ಕಾರಣನಾದ ಪರಮಾತ್ಮನನ್ನೂ ಆತನ ಸ್ವರೂಪವಂ ತೋರಿಸುವ ವೇದ ಪುರಾಣಂಗಳನ್ನೂ ನಿಂದಿರುವ ನಾಸ್ತಿಕ್ಯವೆಂಬ ಮಹಾಪಾತಕವು, ಉಪಕಾರಿಗಳಿಗಪಕಾರ ಮಾಡುವದರಿಂ ಬಂದ ಪಾಪವು, ಇಲ್ಲದ ದೋಷಗಳನಾರೋಪಿಸುವದುಂ, ಪರಸ್ತುತಿ ಮಾಡುವದುಂ, ಆತ್ಮಸ್ತುತಿ ಮಾಡುವದುಂ, ಯಜ್ಞಕ್ಕೆ ವಿಘ್ನ ಮಾಡುವದುಂ, ವೇದವುಂ ವೈದಿಕರಂ ದೂಷಿಸುವದುಂ, ಪರದಾರ ಸಂಗಮ ಪರದ್ರವ್ಯಾಪಹಾರ ದೇವತಾ ದ್ರವ್ಯಾಪಹಾರಗಳುಂ, ಪಙ್ಕ್ತಿಭೇದಗಳುಂ, ಧರ್ಮವಿಕ್ರಯವಂ ಮಾಡುವದುಂ, ಶೂದ್ರಾನ್ನ ಭೋಜನವುಂ, ಶ್ರಾದ್ಧ ಭೋಜನವುಂ, ಸ್ನಾನಮಾರ್ಜಲಾದಿ ಪ್ರೋಕ್ಷಣವುಂ, ಗೋವುಗಳನತಿಕ್ಲೇಶ ಪಡಿಸುವುದುಂ, ಬ್ರಾಹ್ಮಣರತೇಜೋಭಂಗವಂ ಮಾಡುವುದುಂ, ನಿತ್ಯದಲ್ಲಿಯೂ ನಗರವಾಸವುಂ, ಅಭಕ್ಷ್ಯ ಭಕ್ಷಣವುಂ, ಕನ್ಯಾವಿಕ್ರಯಂ ಮಾಡುವದುಂ, "ವಿವಾಹವಿಲ್ಲದೆ ಮೈನೆರೆದ", ವೃಷಳಿಯಂ ಮದುವೆಯಾಗುವದುಂ, ಶರಣಾಗತರ ಕೊಲ್ಲುವದುಂ, ಮೊದಲಾದ ಅನೇಕ ವಿಧಪಾತಕಂಗಳು ಈ ಕಲ್ಯಾಣೀಸ್ನಾನದಿಂ ಪರಿಹೃತವಾಗುವದು ಇವಲ್ಲದೆಯುಂ ಆ ಪರ್ವತದಲ್ಲಿ ಸತ್ಕ್ಷೇತ್ರಗಳುಂಟು ಅದಾವುವೆಂದರೆ ಆ ಪರ್ವತದಲ್ಲಿ ನರಸಿಂಹ ಗಿರಿಯೆಂದು ಒಂದುನ್ನತ ಶಿಖರವಿರುವದು ಆ ಶಿಖರದಲ್ಲಿ ಪೂರ್ವದಲ್ಲಿ ಪರಮಭಕ್ತನಾದ ಪ್ರಹ್ಲಾದನು ನರಸಿಂಹ ರೂಪನಾದ ನನ್ನಲ್ಲಿ ವಿಶ್ವಾಸವುಳ್ಳವನಾಗಿ ಯೋಗಾನರಸಿಂಹರೂಪವಂ ಧ್ಯಾನಸಾಕ್ಷಾತ್ಕಾರದಿಂ ನೋಡಿ ಪ್ರತಿಷ್ಠೆಯಂ ಮಾಡಿ ಆರಾಧಿಸಿದನು. ಈಗಲೂ ಆ ನರಸಿಂಹ ಗಿರಿಯನೇರಿ ಅಲ್ಲಿರುವ ಯೋಗಾನರಸಿಂಹನ ಸೇವೆಯಂ ಮಾಡುವವರಿಗೆ ಸಂಸಾರದುಃಖದಿಂ ಬಿಡುಗಡೆಯಾಗಿ ಚತುರ್ವಿಧ ಪುರುಷಾರ್ಥ ಸಿದ್ಧಿಗಳುಂಟಾಗುವವು. ಈ ನರಸಿಂಹಕ್ಷೇತ್ರದ ತಳದಲ್ಲಿ ಕಲ್ಯಾಣೀ ಪೂರ್ವತೀರದೊಳ್ ವರಾಹಕ್ಷೇತ್ರವಿರುವದು ಅಲ್ಲಿ ವರಾಹರೂಪಿಯಾದ ಭಗವಂತನು ಭೂಮಿದೇವಿಗೆ ವರಾಹ ಚರಮ ಶ್ಲೋಕವೆಂಬೆರಡು ಶ್ಲೋಕವನುಪದೇಶಮಾಡಿದರು. ಈಗಲು ಆ ಚರಮ ಶ್ಲೋಕಗಳನ್ನು ಭಕ್ತಿಪೂರ್ವಕವಾಗಿ ಅನುಸಂಧಾನಮಾಡಿ ಆ ವರಾಹಸ್ವಾಮಿಯಂ ಸೇವಿಸುವ ಚೇತನರಿಗೆ ಸಕಲ ಪುರುಷಾರ್ಥಗಳುಂ ಸಿದ್ಧಿಸುವುದು. ಈ ಕಲ್ಯಾಣಿಯ ದಕ್ಷಿಣತೀರದಲ್ಲಿ ಸೀತಾರಣ್ಯವೆಂಬ ಕ್ಷೇತ್ರವಿರುವದು, ಅಲ್ಲಿ ಪೂರ್ವಕಾಲದಲ್ಲಿ ಲಕ್ಷ್ಮಣನು ಸೀತಾದೇವಿಗೆ ಮನಸ್ಸಂತೋಷ ಮುಂಟಾಗುವ ತೆ ಪರ್ಣಶಾಲೆಯಂ ನಿರ್ಮಿಸಿದನು. ಆ ಕಲ್ಯಾಣಿಯ ಪಶ್ಚಿಮತೀರದಲ್ಲಿ ಅಜ್ಞಾನ ನಿವಾರಕವೆಂಬ ಅಶ್ವತ್ಥವೃಕ್ಷದ ಕೆಳಭಾಗದಲ್ಲಿ ಮಹಾಭಾಗವತ ಕ್ಷೇತ್ರವಿರುವದು, ಅಲ್ಲಿ ಅಂಬರೀಷರು ಪರೀಕ್ಷಿತ್ ಶುಕ ಪುಂಡರೀಕ ರುಕ್ಮಾಂಗದರು ಮೊದ

ಸುವುದಕೆ ಪರಮಭಕ್ತಿಯೊಂದೇ ಕಾರಣವಲ್ಲದೆ ಪೂಜೆ ದಾನ ತಪಸ್ಸು ಮೊದಲಾದ ಕರ್ಮಗಳಿಂ ಭಾವಶುದ್ಧಿಯಂ ಪರೀಕ್ಷಿಸಿ, ಪರಮಭಕ್ತಿಯುಳ್ಳರ ರಕ್ಷಣಕ್ಕೆ ಕೈಕಾಣಿಕೆಯಾಗಿ ಕೊಳ್ವನು. ಆದುದರಿಂದೆಲೈ ಮುನಿಗಳಿರಾ ? ನೀವುಂ ಪರಮಭಕ್ತಿಯಿಂದೆಡೆಗೂಡಿ ಈ ಪುಣ್ಯಸ್ಥಲವನ್ನೈದಿರೆಂದು ಹೇಳಿ, ಮತ್ತಂ ಅಷ್ಟತೀರ್ಥಗಳ ವೈಭವವನುಪದೇಶಿಸಿದ ದೆಂತೆಂದರೆ— ಯಾದವಾದ್ರಿಗೆ ಉತ್ತರದಿಕ್ಕಿನಲ್ಲಿ ಪರಮ ಪಾವನವಾಗಿಯೂ ಮಧು ರಪಂಚ ತೀರ್ಥಗಳಿಂ ರಮಣೀಯವಾಗಿಯೂ, ವೈಕುಂಠಗಂಗೆಯೆಂಬ ಹೆಸರಿನಿಂ ಪ್ರಸಿದ್ಧವಾಗಿಯೂ ಇರುವ ಒಂದಾನೊಂದು ನದಿಯು ಪ್ರವಹಿಸುತ್ತಲಿದೆ. ಯಾವನದಿಯು ಪೂರ್ವಕಾಲದಲ್ಲಿ ಭಗವಂತನು ವಿರೋಚನ ತನಯನಾದ ಬಲಿಯಂ ನಿಗ್ರಹಿಸುವುದಕೆ ತ್ರಿವಿಕ್ರಮಾವತಾರಂ ಕೊಂಡು, ಪಾದಾಕ್ರಮಣದಿಂದೂರ್ಧ್ವ ಲೋಕಂಗಳ ನಾಕ್ರಮಿಸಿ, ಬ್ರಹ್ಮಾಂಡಕಟಾಹವಂ ಭೇದಿಸುತ್ತೈದಿದ ಸಮಯದೊಳ್, ಬ್ರಹ್ಮನುಂ ತನ್ನ ಕಮಂಡಲು ತೀರ್ಥದಿಂ ಪಾದ್ಯೋದಕಂ ಸಮರ್ಪಿಸಲ್, ಮಂದಾಕಿನಿ ಪುಟ್ಟಿದುದಂ ನೋಡಿ ಪರಮ ಪದದೊಳ್ ನಿತ್ಯಸೂರಿಗಳುಂ ಮತ್ತಂ ಪುಣ್ಯತೀರ್ಥಾಭಿಲಾಷೆಯಿಂ ವಿರಜಾತೀರ್ಥವಂ ಕೊಂಡು, ಪರಮಪದನಾಥನ ಪಾದಾರವಿಂದವಂ ತೊಳೆಯಲಾ ತೀರ್ಥವೇಕಡೇಶಂ ಯಾದವಾದ್ರಿಯೊಳ್ ಸೇರಿ ಪ್ರವಾಹವಾಗಿ ಪರಿದುದರಿಂ ವೈಕುಂಠ ಗಂಗೆಯೆಂದು ಪ್ರಸಿದ್ಧವಾದುದು. ಅಲ್ಲಿ ಭಕ್ತಿಸಾರರೆಂಬ ಯೋಗೀಶ್ವರರ್ ತಪಸ್ಸಂ ಮಾಡಿ ಸಿದ್ಧಿಯನೆಯ್ದಿ ವೈಕುಂಠವಂ ಪೊಂದಿದರ್. ಆದುದರಿಂದಾತೀರ್ಥಮುಂ ಪರಮ ಪಾವನವಾಗಿರುವುದು. ಇದಕ್ಕೆ ದಕ್ಷಿಣ ಭಾಗದೊಳ್ ಪೂರ್ವೋಕ್ತಮಸೂದನನ ಕ್ಷೇತ್ರದಲ್ಲಿ ನಾರಾಯಣ ತೀರ್ಥಮೆಂಬುದಾಗಿ ಒಂದಾನೊಂದು ತೀರ್ಥಮಿರುವದು. ಆ ತೀರ್ಥ ಸ್ನಾನದಿಂ ಚೇತನರಿಗೆ ಕ್ರೂರವಾದ ನರಕಪ್ರಾಪ್ತಿಗೆ ಕಾರಣವಾದ ಪಾಪಗಳೆಂಬ ಅಂಗಾರರಾಶಿಯು ಶಮನವಾಗಿ, ಮರಣಕಾಲದೊಳ್ ನಾರಾಯಣಾಂಘ್ರಿ ಸ್ಮರಣಮುಂಟಾಗುವುದು. ಈ ನಾರಾಯಣ ತೀರ್ಥಕ್ಕಂ ಕಲ್ಯಾಣೀ ತೀರ್ಥಕ್ಕಂ ಮಧ್ಯಭಾಗದೊಳ್ ಪರಾಶರ ಮುನೀಶ್ವರರು ಮೈತ್ರೇಯರಿಗೆ ವಿಷ್ಣುತತ್ತ್ವ ಪ್ರತಿಪಾದಕವಾಗಿ, ಪುರಾಣ ರತ್ನವೆನಿಸುವ ವಿಷ್ಣುಪುರಾಣಮಂ ಪೇಳ್ದರು. ಆಯಾಶ್ರಮದೊಳ್ ಪರಾಶರ ತೀರ್ಥಮೊಂದುಂ, ಮೈತ್ರೇಯ ತೀರ್ಥಮೊಂದುಂ, ಎರಡು ಪೆಸರ್ಗಳಂ ಪಡೆದ ತೀರ್ಥಮಿರುವುದು. ಆ ಯಾದವಾದ್ರಿಯ ವಾಯುವ್ಯದಿಕ್ಕಿನಿಂ ದಕ್ಷಿಣಾಭಿ ಮುಖವಾಗೊಂದು ಪುಣ್ಯನದಿಯು ಪ್ರವಹಿಸುತ್ತಿರುವುದು. ಅದರ ತಡದಲ್ಲಿ ಯಾದವೇಂದ್ರನೆಂಬ ದೊರೆಯು ಯಾಗವಂಮಾಡಿ ತಪಸ್ಸಿದ್ಧಿಯಿಂದಿಂದ್ರ ಪದವಿಯಂ ಪೊಂದಿದನು.

ಈಗಲುಂ ಆ ನದೀತೀರದಲ್ಲಿ ಬೆಳೆಯುವ ಸಮಿದ್ದರ್ಭೆಗಳಿಂ ಯಾಗವಮಾಳ್ಪವರ್ಗೆ ಒಂದು ಯಾಗದಿಂದಲು ಮನೇಕಾಶ್ವಮೇಧಫಲಂ ದೊರಕುವದು. ಮತ್ತಮಾ ತೀರ್ಥ ಸ್ನಾನದಿಂ ಪುಣ್ಯಲೋಕಂಗಳು ಅಗಣ್ಯವಾಗಿ ಲಭಿಸುವುದು. ಮತ್ತಮಾ ಪರ್ವತಾಗ್ರದೊಳ್ ದಕ್ಷಿಣ ಭಾಗದಲೊಂದು ವಿಶಾಲಶಿಲಾ ತಲಮಿರುವುದು. ಆ ಶಿಲಾತಲದೆ[illegible]

ಪಾಷಂಡ ನಿರಸನಾರ್ಥವಾಗಿ ಭಗವಂತನು ದತ್ತಾತ್ರೇಯರೂಪದಿಂದವತರಿಸಿ, ಸಪ್ತ ರಾದವೇದಪುರುಷರೊಡಗೂಡಿ, ಸನ್ಯಾಸಾಶ್ರಮಸಾರ್ಥವಾಗಿ ಕಾಷಾಯ ಪರಿಧಾನವುಂ ಸ್ವೀಕರಿಸಿದರು. ಅದರಿಂದಾ ಶಿಲಾತಲಕ್ಕೆ ಪರಿಧಾನಶಿಲೆಯೆಂಬ ಪ್ರಖ್ಯಾತಿಯುಂಟಾದುದು. ಅಲ್ಲಿಯೇ ವೇದಪುರುಷರು ವೇದಾರ್ಥ ವಿಚಾರವಮಾಡಿ ಜ್ಞಾನಸಂಪಾದನಮಾಡಿರುವದರಿಂದಾ ಪುಷ್ಕರಿಣಿಗೆ ವೇದಪುಷ್ಕರಿಣಿಯೆಂಬ ನಾಮಧೇಯವಾದುದು. ಈಗಲೂ ಆ ಶಿಲಾತಲದೊಳ್ ಸನ್ಯಾಸಾಶ್ರಮಮುಂ ಕಾಷಾಯ ಪರಿಗ್ರಹವುಂ ಮಾಡುವವರ್ ನಾರಾಯಣನೆಂದೇ ಭಾವಿಸಲ್ಪಡುವರ್. ಆ ತೀರ್ಥದೊಳ್ ಸ್ನಾನಗೆಯ್ವ ಭಾಗವತೋತ್ತಮರ ಪಾದತೀರ್ಥಮಂ ದೇವತೆಗಳುಂ ಭಾಗ್ಯವೆಂದು ಭಾವಿಸುತಿರುವರು. ಆ ಪರ್ವತದ ಪಶ್ಚಿಮಭಾಗದಲ್ಲಿ ದರ್ಭತೀರ್ಥವೆಂಬ ಒಂದಾನೊಂದು ತೀರ್ಥವಿರುವುದು. ಅಲ್ಲಿ ಶಾಂಡಿಲ್ಯ ಮುನೀಶ್ವರರುಂ ತಪೋವನಂ ಮಾಡಿಕೊಂಡು ವೇದಾರ್ಥ ಪ್ರತಿಪಾದಕವಾಗಿ, ವೇದಪ್ರತಿಸ್ಪರ್ಧಿ ಪ್ರಮಾಣವಾಗಿ ಭಗವತ್ಕೃಪೋಚಿತವಾದ ಶ್ರೀಪಾಂಚರಾತ್ರಪ್ರಮಾಣಗಳಿಂ ಧರ್ಮಸಂಸ್ಥಾಪನಂಮಾಡಿದರಾದುದರಿಂದ ಆ ದರ್ಭತೀರ್ಥವು ಅತಿಪರಿಶುದ್ಧವಾದದ್ದು. ಅಲ್ಲಿ ಹುಟ್ಟಿದ ದರ್ಭೆಗಳನ್ನು ಆಸ್ತರಣ ಮಾಡಿಕೊಂಡು ಅದರಲ್ಲಿ ಮಲಗಿ ಪ್ರಾಯೋಪವೇಶದಿಂದ ಶರೀರವಂ ಬಿಡುವರಿಗೆ ಮುಕ್ತಿಯು ತಪ್ಪಲಾರದು. ಆ ದರ್ಭತೀರ್ಥಕ್ಕುತ್ತರ ಭಾಗದಲ್ಲಿ ಜಲಾಶತೀರ್ಥವೆಂದು ಒಂದು ಪುಣ್ಯತೀರ್ಥವು ಮಧುರವಾದ ತೀರ್ಥಗಳಿಂ ಶೋಭಿತವಾಗಿರುವುದು. ಅಲ್ಲಿ ತ್ರಿಶಂಕುವಿನ ಯಾಗ ಪ್ರಸಂಗದಲ್ಲಿ ವಿಶ್ವಾಮಿತ್ರನ ಶಾಪದಿಂ ಚಂಡಾಲರಾಗಿದ್ದ ವಸಿಷ್ಠಪುತ್ರರಿಗೆ ಆ ತೀರ್ಥಸ್ನಾನದ ಮಹಿಮೆಯಿಂದ ಚಾಂಡಾಲತ್ವಂ ಬಿಡುಗಡೆಯಾಗಿ ಪುಣ್ಯಲೋಕಪ್ರಾಪ್ತಿಯಾದುದು. ಮತ್ತಾ ಜಲಾಶತೀರ್ಥಕ್ಕೆ ಉತ್ತರ ಭಾಗದಲ್ಲಿ ಪದ್ಮತೀರ್ಥವೆಂಬ ತೀರ್ಥವಿರುವದು. ಅಲ್ಲಿ ಬ್ರಹ್ಮಪುತ್ರರಾದ ಸನತ್ಕುಮಾರರು ಪರ್ಣಶಾಲೆಯಂ ಮಾಡಿಕೊಂಡು ಆ ಸರಸ್ಸಿನಲ್ಲಿ ಪುಟ್ಟಿದ ಪದ್ಮಸೌಗಂಧಿಕಾದಿ ಪುಷ್ಪಗಳಿಂ ಶ್ರೀತಿರುನಾರಾಯಣಸ್ವಾಮಿಯವರ ಚರಣಾರವಿಂದವನರ್ಚಿಸಿದರು. ಈಗಲು ಮಾತೀರ್ಥದೊಳಿರುವ, ಅಲ್ಲಿನ ಕಮಲಗಳಿಂ ಕಮಲಾಕ್ಷನನಭ್ಯರ್ಚಿಸಿದವರ್ ಅರ್ಚಿರಾದಿಮಾರ್ಗದಿಂ ಪೋರಟು ಅಪ್ರಾಕೃತ ಸೂರಿಗಳಿಂದರ್ಚನೆಗೊಳ್ವರು. ಮತ್ತಲ್ಲಿ ಬೇರೆ ಪದ್ಮಾಕ್ಷಮಾಲೆಯಂ ಕಂಠದಲ್ಲಿ ಧರಿಸುವವರು ಅರ್ಚಿರಾದಿಮಾರ್ಗದೊಳ್ ದೇವತೆಗಳಿಂದ ಕಲ್ಪಕುಸುಮಮಾಲೆಯಿಂದಲಂಕರಿಸಲ್ಪಡುವರು — ಈಪ್ರಕಾರವಾಗಿ ಆ ಪರ್ವತದ ಸುತ್ತುಮಿರುವ ಅಷ್ಟತೀರ್ಥಂಗಳುಂ ಅಷ್ಟಾಕ್ಷರದೋಪಾದಿಯಲ್ಲಿ ಪಾವನವಾಗಿಯುಂ ಭೋಗ್ಯವಾಗಿಯುಂ ಪುರುಷಾರ್ಥಪ್ರದವಾಗಿಯು ಇರುವುವು. ಲೋಕದೊಳೆಲ್ಲಿ ಯಾದರುಂ ಸ್ನಾನಕಾಲದಲ್ಲಿ ಅಷ್ಟತೀರ್ಥಗಳಂ ಸ್ಮರಿಸಿದ ಮಾತ್ರದಿಂದಷ್ಟತೀರ್ಥಸ್ನಾನಫಲವು

ಲಭಿಸುವವಾಗಿ ಸಾಕ್ಷಾತ್ತಾಗಿ ಅಲ್ಲಿ ಸ್ನಾನಮಾಡುವವರ ಸುಕೃತವು ಹೇಳಲೇಕೆ? ಈ ತೀರ್ಥಗಳ ತೀರದಲ್ಲುಂಟಾದ ತುಳಸೀಮಣಿ ಮಾಲಿಕೆಯು ಧರಿಸುವ ಭಾಗವತೋತ್ತಮರು ಗಂಗಾದಿ ತೀರ್ಥಗಳಿಗಿಂತತಿಶಯವಾಗಿ ಲೋಕವನ್ನು ಪಾವನಮಾಡುವರು. ಈಪ್ರಕಾರವಾಗಿ ಅಷ್ಟತೀರ್ಥಗಳ ಮಹಿಮೆಯು ಹೇಳಿ ಫಲಶ್ರುತಿಯನ್ನು ಹೇಳುವರು. ಕೇಳಿರೈ ಋಷಿಗಳಿರಾ? ಪುಣ್ಯಕ್ಷೇತ್ರವಲ್ಲದೆ ಸಾಮಾನ್ಯವಾದೊಂದು ದೇಶದಲ್ಲಿ ಮಾಡುವ ಪುಣ್ಯಕರ್ಮಗಳು ಪುಣ್ಯಕ್ಷೇತ್ರಗಳಲ್ಲಿ ಮಾಡಲ್ಪಟ್ಟರೆ ಒಂದಕ್ಕೆ ಹತ್ತರಷ್ಟು ಫಲವು ಕೊಡುವದು. ಪುಣ್ಯಕ್ಷೇತ್ರಗಳಲ್ಲಿಯೂ, ಶ್ರೇಷ್ಠವಾದ ಪುಷ್ಕರ ಕ್ಷೇತ್ರದಲ್ಲಿ ನೂರರಷ್ಟು ಪುಣ್ಯಫಲವಂ ಕೊಡುವದು. ಅದಕ್ಕಿಂತತಿಶಯವಾದ ಪ್ರಯಾಗದಲ್ಲಿ ಮಾಡಲ್ಪಡುವ ಒಂದೆ ಧರ್ಮವು ಸಹಸ್ರಗುಣವಾಗುವದು. ಅದೇಪುಣ್ಯವು ಗಂಗಾಗಂಡಕೀ ಸಂಗಮಸ್ಥಾನವಾದ ಸಾಲಗ್ರಾಮದಲ್ಲಿ ಮಾಡಲ್ಪಟ್ಟಲ್ಲಿ ಕೋಟಿಫಲವನ್ನುಂಟುಮಾಡುವದು. ಸರ್ವೋತ್ಕೃಷ್ಟವಾದ ಯಾದವಾದ್ರಿಯಲ್ಲಿ ಮಾಡಲ್ಪಡುವ ಆಧರ್ಮವು ನೂರುಕೋಟಿಯಷ್ಟು ಫಲಪ್ರದವಾಗುವದು. ಅದರೊಳಗೂ ಪಾತ್ರಾಪಾತ್ರವಿವೇಕವನರಿತು ವೈದಿಕರಾಗಿಯೂ ಸಾತ್ವಿಕರಾಗಿಯೂ ಇರುವ ನನ್ನ ಭಕ್ತರ ವಿಷಯದಲ್ಲಿ ಕಿಂಚಿತ್ಕರರೂಪವಾಗಿ ಮಾಡಲ್ಪಡುವ ಧರ್ಮವು ಅಂಥಾ ಭಾಗವತರ ಕಟಾಕ್ಷದಿಂದ ಅಶ್ರದ್ಧಾದ್ಯಾದಿ ದೋಷಗಳಿದ್ದಾಗ್ಯೂ ಪಾವನವಾಗಿ ಕೋಟಿ ಕೋಟಿ ಗುಣವಾದ ಫಲವಂ ಕೊಡುವದು. ಯಾವ ದುರಾತ್ಮರಾದರೂ ಆ ಯಾದವಾದ್ರಿಯಲ್ಲಿರ್ಪ ನನ್ನ ಭಕ್ತರಿಗೆ ಅಪಕಾರ ಮಾಡುವರಾದರೆ, ಅಂಥವರು ಆ ಕ್ಷೇತ್ರ ರಕ್ಷಾರ್ಥವಾಗಿ ನನ್ನ ಆಜ್ಞೆಯಿಂದಿರ್ಪ ಚಕ್ರಜ್ವಾಲೆಯಲ್ಲಿ ಶಲಭಪ್ರಾಯರಾಗಿ ನಾಶಹೊಂದುವರು. ಆಕಾರಣದಿಂ ದ್ವಾಪರಾಂತದಲ್ಲಿ ಕಲಿಪುರುಷನು ಆ ಕ್ಷೇತ್ರವನಾಕ್ರಮಿಸುವದಕ್ಕೋಸ್ಕರ ಬಂದು, ವಿಷ್ಣು ಕಿಂಕರರ ವೇತ್ರಪ್ರಹಾರಕ್ಕುಂ ಸುದರ್ಶನಮಹಾಜ್ವಾಲೆಗುಮಂಜಿ ಪ್ರವೇಶಿಸಲಿಲ್ಲವು. ಯಾವ ಜೀವನಾದರುಂ ಆ ಪರ್ವತದಲ್ಲಿ ಒಂದು ಸಂವತ್ಸರವಾಗಲಿ ಒಂದು ತಿಂಗಳಾಗಲಿ ಅಥವಾ ಒಂದು ಪಕ್ಷವಾಗಲಿ, ಒಂದು ದಿವಸವಾಗಲಿ, ಅದಕ್ಕು ಅನುಕೂಲವಿಲ್ಲದವರು ಮೂರುರಾತ್ರಿಯಾಗಲಿ ಕೊನೆಗೆ ಒಂದು ರಾತ್ರಿಯಾದರೂ ವಾಸಮಾಡುವರೋ ಅವರೇ ನನಗೆ ಪ್ರಿಯಭಕ್ತರಾಗುವರೇ ಹೊರತು ಇದೊಂದು ಇಲ್ಲದವರು ನನ್ನ ಪ್ರೀತಿವಿಷಯರಾಗಲಾರರು. ಮತ್ತಂ ಫಾಲ್ಗುಣಶುಕ್ಲ ಪೂರ್ಣಮಾಸಿಯೆಂಬ ನಾನಲ್ಲಿ ಸಾನ್ನಿಧ್ಯವು ಮಾಡಿದೆನಾದಕಾರಣದಿಂದ ಸಮಸ್ತ ವರ್ಷಗಳಲ್ಲಿಯೂ ಅತಿಶ್ರೇಷ್ಠವಾಗಿರುವ ಆ ಪೂರ್ಣಮಾಸ್ಯೆಯಲ್ಲಿ ಆ ನಾರಾಯಣಾದ್ರಿಯಲ್ಲಿ ಒಂದು ಮುಹೂರ್ತವಾದರೂ ನನ್ನ ಭಜಿಸುವಂಥಾ ಭಕ್ತರನ್ನು ಸ್ತನ್ಯಪಾನಮಾತ್ರದಿಂ ಜೀವಿಸುವ ಶಿಶುವಂ ತಾಯಿಯು ಯಾವರೀತಿಯಿಂದ ರಕ್ಷಿಸುವಳೋ ಆ ಪ್ರಕಾರವಾಗಿ ರಕ್ಷಿಸು

ವ ಮುಕ್ತಾಭರಣದಂತೆಸೆವ ಶ್ರೀ ನರನಾರಾಯಣ ಸ್ವಾಮಿಯಂ, ನೀರಾಜನದಿಂ ನುತಿಸುವುದಕಾಗಿ, ಎಂದಿನಂತೆ ಬಂದು ನಾರಾಯಣನ ಮುಂದೆ ನಿಂದು, ಭಕ್ತಿಗದ್ಗದವಾದ ಕಂಠಸ್ವರಗಳಿಂ ಪಾಡುತಿರಲಾನಾರದ ಮುನೀಂದ್ರನಂ ಆ ಋಷಿಗಳೆಲ್ಲರುಂ ನೋಡಿ, ಆಶ್ಚರ್ಯಭರಿತರಾದರು.

ಆಗಲಾ ನಾರದರು ವ್ಯಾಸಾದಿ ಮುನಿಗಳಂ ಕನಿಕರದಿಂ ನೋಡಿ, "ಎಲೈ ಋಷಿಗಳಿರಾ ; ನೀವುಗಳೆಲ್ಲರುಂ ಸೇರಿ ಇರ್ದರುವುದಕ್ಕೆ ಕಾರಣವೇನು ? ನಿಮ್ಮ ದರ್ಶನಮಾತ್ರದಿ ನಾನುಂ ಕೃತಾರ್ಥನಾಗುವೆಂ, ಸಕಲ ದೇವತಾ ಸಂದರ್ಶನಮುಂ, ಸಕಲ ತೀರ್ಥಾವಗಾಹನಮುಂ, ಪಲವುಕಾಲಾಂತರದಿಂ ಸುಕೃತಮಾಗುವುದು. ನಿಮ್ಮಂತೆ ಸಾಧುಗಳ ದರ್ಶನವು ತತ್ ಕ್ಷಣದೊಳೆ ಪರಿಶುದ್ಧಿಯಂ ಮಾಡುವುದು. ಆದುದರಿಂ ನಾನುಂ ವಿಷ್ಣುಭಕ್ತರ ಸಂದರ್ಶನಾರ್ಥವಾಗಿ, ಈ ಲೋಕದೊಳೆ ಸಂಚರಿಸುತ್ತಾ, ಕಾಲಕಾಲದೊಳೆ ಶ್ರೀ ನರನಾರಾಯಣ ಸ್ವಾಮಿಯವರ ಸಂಕೀರ್ತನಂಗೈಯಲೋಸಗಮಿಲ್ಲಿಗೆ ಬರುವೆಂ. ಈ ಕಲಿಯುಗದೊಳೆ ನಾಮಸಂಕೀರ್ತನದಂತೆ ಅತಿಶಯವಾದ ಧರ್ಮವು ಯಾವುದೊಂದೂ ಇಲ್ಲವು. ಅಶ್ವಮೇಧಾದಿ ಯಾಗಗಳಿಗಿಂತಲುಂ, ನಾನಾವಿಧ ತಪಸ್ಸುಗಳಿಗಿಂತಲುಂ, ಯಮನಿಯಮಾದಿ ಯೋಗಗಳಿಗಿಂತಲುಂ, ನಿರಂತರಧ್ಯಾನ ಸಮರ್ಚನ ಪ್ರದಕ್ಷಿಣ ನಮಸ್ಕಾರಾದಿಗಳಿಗಿಂತಲುಂ, ಅತಿಶಯವಾಗಿ ನಾಮಸಂಕೀರ್ತನದಿಂ ಭಗವಂತನು ಸಂತೋಷಿಸುವನು. ನಾರಾಯಣನೆಂಬ ನಾಮಾಕ್ಷರಂಗಳುಂ ನಾಲಗೆಗೆ ರಸಾಯನದಂತೆ ರುಚಿಕರವಾಗಿಯುಂ, ದುರಿತಾಪತ್ತುಗಳಂ ಪರಿಹರಿಸುವ ರಕ್ಷಾಮಂತ್ರರೂಪವಾಗಿಯುಂ, ಸಕಲ ಶುಭಾವಹವಾಗಿಯುಂ, ಇರುವುದು. "ಎಂದು ಪೇಳಲಾ ಋಷಿಗಳಂ ಹರುಷದಿಂದರಳಿದ ಮೊಗದಾವರೆಗಳಿಂ ನಾರದರ ಮುಖಮೆಂಬ ಬಾಲಸೂರ್ಯಮಂಡಲಮಂ ನೋಡಿ, ಮುಕುಳಿತಕರ ಕಮಲಯುಗಳರಾಗಿ ತಮ್ಮ ಕಾರ್ಯಮಂ ಬಿನ್ನವಿಸಿದರದೆಂತೆನೆ.

"ಎಲೈ ಸುರಮುನಿಶ್ರೇಷ್ಠನೆ ? ನಾವುಗಳು ಕಲಿಯುಗವು ತಲೆದೋರುತ್ತಿರಲಾಗಿ, ತಪೋವಿಘ್ನವಿಲ್ಲದೆ, ನಿರ್ದುಷ್ಟವಾಗಿಯುಂ, ಪಾವನವಾಗಿಯುಮಿರ್ಪ ಪುಣ್ಯಕ್ಷೇತ್ರವನ್ನರಸುತ್ತೀ ನರನಾರಾಯಣಾಶ್ರಮಕ್ಕೆ ಬಂದು, ಶ್ರೀನರನಾರಾಯಣ ಸ್ವಾಮಿಯವರಂ ಕೇಳಲಾಗಿ, ದಕ್ಷಿಣದೇಶದೊಳೆ ನಾರಾಯಣಾದ್ರಿಯೆಂಬ ಕ್ಷೇತ್ರವು ಕಲಿದೋಷವಿಲ್ಲದೆ ಭೂಮಂಡಲದ ಸಕಲ ಪುಣ್ಯಕ್ಷೇತ್ರಂಗಳೊಳು ಶ್ರೇಷ್ಠವಾಗಿರುವುದೆಂದು ಅದರ ಮಹಿಮೆಗಳಂ ಸಂಕ್ಷೇಪವಾಗಿ ಬಣ್ಣಿಸಿ, ಇನ್ನೂ ವಿಸ್ತಾರವಾಗಿ ಆಕ್ಷೇತ್ರದ ವೈಭವಂಗಳಂ ಗುಣಂಗಳಂ ಪುಣ್ಯಚರಿತೆಗಳಂ ನಾರದಂ ನಿಮಗರುಹುವನೆಂದಭಯವಂಕೊಟ್ಟು ಅಂತರ್ಧಾನವಮೈದಿದರು. ಆದುದರಿಂ ಕಾರ್ಮುಗಿಲಂ ಚಾತಕಗಳಂತೆ ನಿಮ್ಮಾಗಮನಮಂ ಬಯಸುತ್ತಿರುವ ನಮಗೆ ಸಂದರ್ಶನವಿತ್ತು ನೇತ್ರಾನಂದವನುಂಟುಮಾಡಿದಿರಿ.

ಶ್ರೀಮನ್ನಾರಾಯಣನು ಸ್ವಯಂವ್ಯಕ್ತನಾಗಿ ಯಾದವಗಿರಿಯೆಂದಾಪರ್ವತ

ದೊಳ್ ಸಾನ್ನಿಧ್ಯಮಂ ಮಾಡಿದನು ? ಯಾವಕಾರಣದಿಂದಲ್ಲಿ ಕಲಿದೋಷಗಳು ತಲೆದೋರಲರಿಯವು; ಆ ಪರ್ವತದೊಳ್ ಪರಮಪುರುಷನಂ ಆವಾವಧಿಕಾರಿಗಳ್, ಆವಾವಕಾಲದೊಳಾವಾವ ವಿಧಾನದಿಂದಾರಾಧಿಸಿದರ್ ; ಅಲ್ಲಿರ್ಪ ತೀರ್ಥವಾವ ಕಾರಣದಿಂ ಕಲ್ಯಾಣಿ ತೀರ್ಥಮೆಂದು ಪೇಳಲ್ಪಡುತ್ತಿರ್ಪುದು ? ಅಲ್ಲಿರ್ಪ ವ್ಯಾಪ್ತಿಕೆಗಂ ಪ್ರಸಿದ್ಧಿಯುಂಟಾದ ಕಾರಣ ವಾವುದು ? ಆ ನಾರಾಯಣ ಗಿರಿ ಶಿಖರದೊಳ್ ಶ್ರೀಹರಿ ಸನ್ನಿಧಾನವಾದ ತೆರನದಾವುದು ? ಅದು ವೈಕುಂಠವರ್ಧನಕ್ಷೇತ್ರವೆಂದು ಯಾವರೀತಿಯಿಂ ಪ್ರಖ್ಯಾತಿವಡೆದುದು ? ಮತ್ತಂ ಯಾವಯಾವ ಕಾಲದೊಳ್ ಯಾವಯಾವ ಚೇತನರ್ ತಪಸ್ಸಿದ್ಧರಾಗಿ ಮೋಕ್ಷಮಂ ಪೈದಿದರು ? ಅಲ್ಲಿ ಸೇವನಾಚಾರದಿಂದಾವಕಷ್ಟಂಗಳೊದಗುವವು ? ಅಲ್ಲಿರ್ಪ ನಾರಾಯಣನುಂ ಆವಕಿಂಚಿತ್ಕಾರದಿಂ ಚೇತನರನನುಗ್ರಹಿಸುವ ? ಇವೆಲ್ಲವಂ ವಿಸ್ತಾರವಾಗಿ ನಮಗರುಹಬೇಕೆಂದು ಬಿನ್ನವಿಸಲಾ ಸೂತನಿಂತೆಂದನು.

“ ಕೇಳಿರೈ ಋಷಿಗಳಿರಾ ? ಲೋಕದೊಳ್ ದೇಹಾತ್ಮಭ್ರಾಂತಿಯೆಂಬ ಕತ್ತಲೆಯಂ ಜ್ಞಾನವೆಂಬ ದೀಪದಿಂ ನೀಗಿಸುವ ಆಚಾರ್ಯನಿಗಿಂತ ಅತಿಶಯವಾದ ಮಹೋಪಕಾರಿಗಳಿಲ್ಲವು. ಆದುದರಿಂ ಜ್ಞಾನನಿಧಿಗಳಾದ ನಮ್ಮಾಚಾರ್ಯರೆನಿಸುವ ಸನತ್ಕುಮಾರಮುನೀಂದ್ರನಿಂದ ಆ ಮಹಿಮೆಗಳಂ ನಾನರಿತು ನಿಮಗೆ ಪೇಳುವ.

ಸಕಲ ಜಗತ್ಕಾರಣನಾದ ಶ್ರೀಮನ್ನಾರಾಯಣನು ಜಗತ್ಸೃಷ್ಟಿಸ್ಥಿತಿ ಸಂಹಾರಗಳನ್ನು ಲೀಲಾರ್ಥವಾಗಿ ಮಾಡುವನಾದಕಾರಣ ಪೂರ್ವದಲ್ಲಿ ಒಂದಾನೊಂದು ಕಾಲದಲ್ಲಿ ಆ ಭಗವಂತನ ಲೀಲೆಯಿಂದ ಚರಾಚರಾತ್ಮಕವಾದ ಪ್ರಪಂಚಗಳೆಲ್ಲವೂ ಲಯಕ್ರಮದಲ್ಲಿ ಪೃಥಿವ್ಯಾದಿ ಮೂಲಪ್ರಕೃತಿ ಪರ್ಯಂತವೂ ಸಮಸ್ತವೂ ತಮಶ್ಶಬ್ದವಾಚ್ಯವಾದ ಮೂಲಪ್ರಕೃತಿಯಲ್ಲಿ ಲಯವನ್ನೈದಿತು. ಆಪ್ರಕೃತಿಯೂ ಕೂಡ ಪರಬ್ರಹ್ಮನಲ್ಲಿ ಏಕೀಭೂತವಾಗಿತ್ತು. ಮೂಲಪ್ರಕೃತಿಯೆಂದರೆ, ಘಟಾದಿಗಳಿಗೆ ಮೃತ್ತಿಕೆಯೋಪಾದಿಯಲ್ಲಿ ಈ ಜಗತ್ತಿಗೆ ಉಪಾದಾನ ಕಾರಣವಾಗಿಯೂ, ಅಕ್ಷಯವಾಗಿಯೂ, ಅನನ್ಯಾಶ್ರಯವಾಗಿಯೂ, ಪರಿಮಾಣ ಶೂನ್ಯವಾಗಿಯೂ, ಅನಾದಿಯಾಗಿಯೂ, ಅಂತವಿಲ್ಲದ್ದಾಗಿಯೂ, ವಿಕಾರವುಳ್ಳದ್ದಾಗಿಯೂ, ತ್ರಿಗುಣಾಶ್ರಯರೂಪವಾಗಿಯೂ, ಉತ್ಪನ್ನವಾದ ಸಕಲ ವಸ್ತುವನ್ನು ಪ್ರಳಯದಲ್ಲಿ ತನ್ನೊಳಗೆ ಅಡಗಿಸಿಕೊಳ್ಳುವದಾಗಿಯೂ, ಪರಬ್ರಹ್ಮನಿಗೆ ಶರೀರಭೂತವಾಗಿಯೂ, ಇರುವ ಒಂದು ತತ್ವವು. ಇದು ಅಚಿತ್ತೆಂಬದಾಗಿಯೂ, ಮಾಯೆಯೆಂಬದಾಗಿಯೂ, ಅವ್ಯಕ್ತವೆಂಬದಾಗಿಯೂ, ಪ್ರಧಾನವೆಂಬದಾಗಿಯೂ, ಮೂಲಪ್ರಕೃತಿ ಯೆಂಬದಾಗಿಯೂ, ಹೇಳಲ್ಪಡುವದು. ಪುರುಷನೆಂದರೆ ಜ್ಞಾನಾಶ್ರಯವಾಗಿಯೂ, ನಿತ್ಯವಾಗಿಯೂ ವಿಕಾರವಿಲ್ಲದ್ದಾಗಿಯೂ, ದೇಹ ಇಂದ್ರಿಯಾದಿಗಳಿಂತಲೂ ವಿಲಕ್ಷಣವಾಗಿಯೂ, ಅಣುವಾಗಿಯೂ, ಭೇದನ ದಾಹನ ಶೋಷಣಾದಿಗಳಿಗೆ ಅವಿಷಯವಾಗಿಯೂ ಆನಂದರೂಪವಾಗಿಯೂ, ಭಗವಂತನಿಗೆ ಶೇಷಭೂತವಾಗಿಯೂ, ನಿಯಾಮ್ಯವಾಗಿಯೂ, ಶರೀರಭೂತವಾಗಿಯೂ, ಇರುವ ತತ್ವವು. ಇದು ಚಿತ್ತೆಂಬದಾ

ಗಿಯೂ ಜೀವನೆಂಬದಾಗಿಯೂ ಪುರುಷನೆಂದಾಗಿಯೂ ಹೇಳಲ್ಪಡೂವದು. ಈ ಪ್ರಕೃತಿ ಪುರುಷರು ಪರಮಾತ್ಮನಿಗೆ ಶರೀರಭೂತವಾಗಿಯೂ ವಿಧೇಯವಾಗಿಯೂ ಲೀಲೋಪ ಕರಣವಾಗಿಯೂ ಇರುವವದರಿಂದ ಸರ್ವಶೇಷಿಯಾದ ಶ್ರೀವಸ್ವಾಮಿಯು ಜಗತ್ಕಾರ ಣನಾಗಿರುವನು. ಪ್ರಕೃತಿಪುರುಷರಿಗೆ ಶ್ರುತಿಸ್ಮೃತಿಗಳಲ್ಲಿ ಹೇಳಲ್ಪಡೂವ ಕಾರಣತ್ವವು ಭಗವಂತನಿಗೆ ಶರೀರವಾದ್ದರಿಂದ ಇವುಗಳಲ್ಲಿ ಉಪಚರಿಸಲ್ಪಡುವದಲ್ಲದೆ ಸ್ವತಂತ್ರಕಾರ ಣತ್ವವು ಯಲ್ಲಿಯೂ ಇರೂವದಿಲ್ಲವು. ಈ ಪ್ರಕಾರವಾಗಿ ಪ್ರಾಕೃತಪ್ರಳಯದಲ್ಲಿ ಜೀವಾ ತ್ಮರು ಕರಣಕಳೇಬರಗಳಿಂ ವಿಧುರರಾಗಿ ಅಚೇತನಪ್ರಾಯರಾದವರಲ್ಲಿ ಪುರುಷಾರ್ಥಗಳಂ ತೊರೆದು ದುಃಖಿಸುತ್ತಿರಲಾಗಿ ಇವರ ಗತಿ ದುಃಖವಾಗಿನೋಡಿ ಪರಮಕಾರುಣಿಕನಾದ ಸರ್ವೇಶ್ವರನಿಗೆ ನಿರ್ಹೇತುಕವಾದ ಕರುಣೆಯುಂಟಾಗಿ ಆ ಚೇತನರ ರಕ್ಷಣಾರ್ಥ ವಾಗಿ ಭಗವಂತನು ಸೃಷ್ಟಿಸಂಕಲ್ಪವಂ ಮಾಡಲಾಗಿ " ಗಂಧದ್ರವ್ಯದ ಲೊಳ್ಳಯು ಕ್ರಿಯಾದಿಗಳಿಲ್ಲದಿದ್ದಾಗ್ಯೂ ತತ್ಸನ್ನಿಧಾನಮಾತ್ರದಿಂದಲೇ ಮನಸ್ಸಿಗೆ ಕ್ಷೋಭವುಂಟಾ ಗುವಂತೆ ,, ಸಂಕಲ್ಪಮಾತ್ರದಿಂದಲೇ ಪ್ರಕೃತಿಯು ಕ್ಷೋಭವುಳ್ಳದಿ ಮಹತ್ತತ್ವವೆಂ ಬೊಂದು ತತ್ವಮಂ ಸೃಜಿಸಿತು. ಆ ಮಹತ್ತತ್ವವು ವಿಕಾರವುಳ್ಳದಿ ಸಾತ್ವಿಕರಾ ಜಸ ತಾಮಸಗಳೆಂಬ ಮೂರುಗುಣಗಳಿಂ ತ್ರಿವಿಧವಾದ ಅಹಂಕಾರವೆಂಬ ತತ್ವವ ನ್ನುಂಟುಮಾಡಿತು. ಇವುಗಳಲ್ಲಿ ಸಾತ್ವಿಕಾಹಂಕಾರಕ್ಕೆ ವೈಕಾರಿಕವೆಂದೂ ರಾಜಸಾಹಂ ಕಾರಕ್ಕೆ ತೈಜಸವೆಂದೂ ತಾಮಸಾಹಂಕಾರಕ್ಕೆ ಭೂತಾದಿಯೆಂದೂ ನ್ಯಾಮರ್ಸ ವುದುಂ ಟು. ವೈಕಾರಿಕದಿಂದ ಕಿವಿ ತೊಗಲು ಕಣ್ಣು ನಾಲಿಗೆ ಮೂಗುಗಳೆಂಬ ಸ್ಥಾನಗಳಲ್ಲಿರು ವ ಐದು ಜ್ಞಾನೇಂದ್ರಿಯಗಳೂ ವಾಕ್ಕು ಕೈ ಕಾಲು ಗುದ ಗುಹ್ಯಗಳೆಂಬ ಸ್ಥಾನಗಳಲ್ಲಿ ರೂವ ಐದು ಕರ್ಮೇಂದ್ರಿಯಗಳೂ ಅಂತರಿಂದ್ರಿಯವೆಂಬ ಮನಸ್ಸೊಂದೂ ಕೂಡಿ ಹನ್ನೊಂ ದು ಇಂದ್ರಿಯಗಳೂ ಉಂಟಾದವು, ಭೂತಾದಿಯೆಂಬ ತಾಮಸಾಹಂಕಾರದಿಂದ ಶಬ್ದತ ನ್ಮಾತ್ರೆಯೂ ಆಕಾಶವೂ ಉಂಟಾಯಿತು. ಆ ವಾಯುವಿನಿಂದ ರೂಪತನ್ಮಾತ್ರೆಯೂ ತೇಜಸ್ಸು ಉಂಟಾಯಿತು. ಅದರಿಂದ ರಸತನ್ಮಾತ್ರೆಯೂ ಜಲವೂ ಉಂಟಾಯಿತು. ಆ ಜಲದಿಂದ ಗಂಧತನ್ಮಾತ್ರೆಯೂ, ಪೃಥಿವಿಯೂ, ಉಂಟಾಯಿತು. ರಾಜಸಾಹಂಕಾರವು, ಸಾತ್ವಿಕ ತಾಮಸಗಳೆರಡಕ್ಕೂ ಸಹಕಾರಿಯಾಗಿರುವುದು. ಈ ಪ್ರಕಾರ ಭೂತಾದಿ ಯಿಂದುಂಟಾದ ಆಕಾಶಾದಿ ಪಂಚಮಹಾಭೂತಗಳಲ್ಲಿಯೂ, ಶಬ್ದಸ್ಪರ್ಶ ರೂಪರಸ ಗಂಧಗಳೆಂಬ ಐದುಗುಣಗಳೂ ಉತ್ತರೋತ್ತರ ಒಂದೊಂದು ಹೆಚ್ಚಾಗಿ ಇದ್ದದ್ದರಿಂದ ಐದನೇ ಭೂತವಾದ ಪೃಥಿವಿಯಲ್ಲಿ ಈ ಐದುಗುಣಗಳೂ ಇರುವವು. ತನ್ಮಾತ್ರೆಯೆಂದ ರೆ ಸೂಕ್ಷ್ಮರೂಪವು, ಭೂತವೆಂದರೆ ಅದರ ಸ್ಥೂಲರೂಪವು. ಹೆಪ್ಪಿಕ್ಕಿದ ಹಾಲು ಮೊಸ ರಾಗುವಂತೆ ತನ್ಮಾತ್ರೆಯು ಭೂತರೂಪವನ್ನೈದುವದು. ಈ ಪಂಚಭೂತಗಳು ಒಂದ ಕ್ಕೊಂದು ಸೇರದೆ ಒಂದೊಂದರಲ್ಲಿ ಒಂದೊಂದೇ ವಿಧ ಶಕ್ತಿಯುಳ್ಳದ್ದಾಗಿ ಇರುವದರಿಂದ ಅಂಡಸೃಷ್ಟಿಗೆ ಅಶಕ್ಯವಾಗಿರುವುದಂ ನೋಡಿ ಸತ್ಯಸಂಕಲ್ಪನಾದ ಭಗವಂತನು ಉತ್ತ ರೋತ್ತರ ಸೃಷ್ಟಿಕಾರ್ಯಗಳಿಗೆ ವಿಸ್ತರಿಸುವದಕ್ಕೋಸ್ಕರ ಪಂಚಭೂತಗಳನ್ನೂ ಪಂ

ಷ್ಮನೇ ? ನೀನುಂ ಸರ್ವದೇಶ ಸರ್ವಕಾಲ ಸರ್ವಾವಸ್ಥೆಗಳೊಳುಂ ಈ ಮಂತ್ರಮಂ ಸಧಿಯುಂತೆ ಹೃದಯಮಧ್ಯದೊಳ್ ಸ್ಥಾಪಿಸಿ, ಮತ್ತಂ ಆಸನಶಯನ ಯಾನ ಭೋಜನೋತ್ಥಾನ ಕ್ಷುತಪ್ರಸ್ಖಲನಭಯಶೋಕಾದ್ಯವಸ್ಥೆಗಳೊಳುಂ ನಾಲಗೆಯಿಂದುಚ್ಚರಿಸುತ್ತಿರುವುದು. ಈ ಮಂತ್ರಪ್ರಭಾವದಿಂದೆ ದೇವತಿರ್ಯಙ್ಮನುಷ್ಯಾದಿ ಪ್ರಪಂಚಮಂ ಸೃಷ್ಟಿಸಿ ಅನಂತರದೊಳೆನ್ನಂ ಭಜಿಸುವಿಯೆಂದು ಅನುಗ್ರಹಿಸಲಾ ಕಮಲನಯನನಂ ಕಮಲೆ ಯೊಡಗೂಡಿದ ಕಮಲನಾಭನಂ ಸಾಷ್ಟಾಂಗಮಾಗಿ ಧನ್ಯನಾದನೆಂದು ಕೈಗಳಂ ಮುಗಿದು ಮನದೊಳ್ ತನ್ಮಂತ್ರಾನುಸಂಧಾನ ಪೂರ್ವಕವಾಗಿ ವಿವಿಧ ವಿಚಿತ್ರಮಾದೀ ಪ್ರಪಂಚವೆಲ್ಲಮಂ ಸೃಷ್ಟಿಸಿದಂ, ಇಂತು ಸೃಷ್ಟಿಸುವ ಮೊದಲೊಳಾತನಿಂ ಭಗವಂತನ ಕ್ರೋಧಾಂಶವಾದ ಮಹೇಶ್ವರನುಂ ಭಗವದ್ಭಕ್ತರೊಳಗ್ರೇಸರನೆನಿಸಿಯುಂ ಇಂದ್ರಾದಿಸಮಸ್ತ ದೇವತೆಗಳಿಗೆ ಸೇವ್ಯನಾಗಿ ದೇವದೇವನೆನಿಸಿಯುಂ ಜನಿಸಿದಂ ಆತಂಗಾ ಬ್ರಹ್ಮನು ತಾರಕಬ್ರಹ್ಮಮೆಂಬ ಓಂಕಾರಮಂ ಸಕಲ ವೇದಂಗಳಿಂ ಇತ್ತುತ್ತಾತನುಂ ಸರ್ವಜ್ಞನಾಗಿ ಸರ್ವದೇವತೆಗಳಿಂ ಪೂಜ್ಯನಾಗಿ ತನ್ನಂ ಭಜಿಸುವವರ್ಗೆ ಐಹಿಕಾಮುಷ್ಮಿಕಮಪ್ಪ ಪುರುಷಾರ್ಥಂಗಳನಿತ್ತು ಪ್ರಳಯಕಾಲದೊಳ್ ಜಗತ್ಸಂಹಾರಮಂ ಮಾಡುತಿರುವಂ ಈ ಪ್ರಕಾರವಾಗಿ ಸಕಲ ಜಗತ್ಕಾರಣನಾದ ಸರ್ವೇಶ್ವರನ ಪ್ರಸಾದಾಂಶದಿಂದಲುಂ ಕ್ರೋಧಾಂಶದಿಂದಲು ಮುಟ್ಟಿದ ಬ್ರಹ್ಮನುಂ ರುದ್ರನುಂ ಆತನ ಆಜ್ಞಾನುಸಾರವಾಗಿ ಸೃಷ್ಟಿಸಂಹಾರಂಗಳೆಂಬ ಕಾರ್ಯಂಗಳಂ ನಿರ್ವಹಿಸುತಿರಲಾ ಸರ್ವೇಶ್ವರಂ ತಾನೇ ರಕ್ಷಿಸುತಿರುವಂ. ಅನಂತರದೊಳ್ ಬ್ರಹ್ಮನುಂ ತನ್ನ ಸೃಷ್ಟಿಕಾರ್ಯಂಗಳೆಲ್ಲಮಂ ನಿರ್ವಹಿಸಿ ದಕ್ಷಾದಿಗಳೊಡಗೂಡಿ ತನಗೆ ಪರಮೋಪಕಾರಕನಾದ ನಾರಾಯಣನಂ ಆರಾಧಿಸಬೇಕೆಂಬ ಮನೋರಥದಿಂ ಚಿಂತಿಸುತ್ತಿರಲ್ ಪರವ್ಯೂಹವಿಭವಾಂತರ್ಯಾಮ್ಯರ್ಚಾ ಭೇದದಿಂದೈದು ವಿಧವಾದ ಸ್ವರೂಪದೊಳ್ ಪರಸ್ವರೂಪಂ ಮಹಾಯೋಗಿಗಳಿಗುಂ ವೇದಂಗಳಿಗು ಮಗಮ್ಯವಾಗಿರುವುದರಿಂದಲುಂ, ವ್ಯೂಹರೂಪ ಪರವಾಸುದೇವ ಸ್ವರೂಪವುಂ ಸಕಲರ್ಗಮಗಮ್ಯವಾದ ಪಾಲ್ಗಡಲ್ ನಡುವೊಳಿರ್ದು ಸಕಲ ದೇವತೆಗಳಿಗು ಮಗಮ್ಯವಾಗಿ ತನಗುಂ ಸಾಕ್ಷಾತ್ಕಾರವಿಲ್ಲದೆ ಗಭೀರಧ್ವನಿಮಾತ್ರದಿಂದ ಭಯವಿವಾದ ದುರ್ಜ್ಞೇಯಸ್ವರೂಪ ವಾದುದರಿಂದಲುಂ ವಿಭವಮೆಂಬ ರಾಮಕೃಷ್ಣಾದ್ಯವತಾರಂಗಳುಂ ಸರ್ವದೇಶ ಸರ್ವಕಾಲದೊಳ್ ಸರ್ವಜನಸೇವ್ಯವಾಗದೆ ಕ್ವಚಿತ್ಕಾಲದೊಳ್ ಕ್ವಚಿದ್ದೇಶದೊಳ್ ಕತಿಪಯಜನಸೇವ್ಯವಾದುದರಿಂದಲುಂ ಅಂತರ್ಯಾಮಿಸ್ವರೂಪಮುಮತಿ ಸೂಕ್ಷ್ಮವಾಗಿ ಅತ್ಯಂತ ಚಂಚಲವಾದ ಮನೋಧಾರಣಾದಿಗಳಿಂ ಮಹಾಯೋಗಿಗಳಿಗುಂ ಪ್ರತ್ಯಕ್ಷವಾಗಲಸಮರ್ಥವಾಗಿರ್ಪುದದರಿಂದಲುಂ ಅರ್ಚಾಸ್ವರೂಪಮೆಂಬುದು ಭಕ್ತಚಿತ್ತಾನುರೋಧವಾಗಿ ದಾರುಲೋಹಶಿಲಾದಿಗಳೊಳ್ ಸಾನ್ನಿಧ್ಯಮನ್ನೈದಿ ಸೌಲಭ್ಯದಿಂ ತನ್ನ ಸಕಲವಿಧಿತಿಗತ್ಯಾದಿಗಳಂ ಚೇತನಾಧೀನವಾಗಿ ಆವಾವುದೊಂದೊಂದುಂ ಸಂತೋಷಮನೈದಿ ಪುರುಷಾರ್ಥಂಗಳಂ

ಜ್ಞಾನಶಕ್ತಿವಡೆದ ಸೂತ್ರವತೀವಲ್ಲಭನೆನಿಸಿದ ಸೇನಾಪತಿಯುಂ ಅವರ ಕೆಲದೊಳ್ ಚಂಡ ಪ್ರಚಂಡ ಕುಮುದ ಕುಮುದಾಕ್ಷರ್ ಮೊದಲಾದ ಅಷ್ಟಮಹಾಮಂತ್ರಿಗಳುಂ ಗಜಾನನರ ಮೊದಲಾದ ಮತ್ತಂ ಪಲಬರ ಮಂತ್ರಿವರ್ಗಂಗಳುಂ, ಮತ್ತಮೊಂದು ಪಾರ್ಶ್ವದೊಳ್ ರುದ್ರಾ ಸುಕೀರ್ತಿಗಳೆಂಬ ತಮ್ಮ ಪತ್ನಿಗಳೊಡಗೂಡಿ ವೇದಮೂರ್ತಿಯಾಗಿಯುಂ ಭಗವಂತನಿಗೆ ತತ್ತತ್ಸಮಯ ಸಮುಚಿತವಾಗಿ ದಾಸ್ಯಮುಂ ಸಖ್ಯಮುಂ ವಾಹನಮುಂ ಆಸನಮುಂ ಧ್ವಜಮುಂ ವ್ಯಜನಾದಿಗಳುಂ ತಾನಾಗಿ ನಿಂದು ವರಿ ಚರಣಂಗಳ್ಗೆಯ್ದೆ ತಲೆವಾಗಿ ನಿಂದ ಗರುಡನುಮುಂ, ಮತ್ತೊಂದು ಪಾರ್ಶ್ವದೊಳ್ ಸಾಸಿರ ಪೆಡೆಗಳ ಮಣಿಗಳ ಕಿರಣಗಳೆಂಬ ದೀಪಾರತಿಯಿಂ ರಮಾಕಾಂತನಿಗೆ ನೀರಾಜನಮೆತ್ತಿ ನಡೆಮಾಡಲ್ ಪಾವುಗೆಯುಂ ಪೊಂಮಡಲ್ ಬೆಳ್ಗೊಡೆಯುಂ ಕುಳ್ಳಿರಲ್ ಗದ್ದುಗೆಯುಂ ಪವಡಿಸಲ್ ಪರ್ಯಂಕಮುಮಾಗಿ ಸೇವೆಗೈಯಲ್ ಸನ್ನದ್ಧನಾಗಿ ಮೆರೆದಿರ್ಪ ಆದಿಶೇಷನುಮುಂ ಭಯಭಕ್ತಿಭರಿತನಾಗಿ ನೋಡುತಿರ್ದಂ, ಮತ್ತಮಾ ವಿಯತ್ತಳದೊಳ್ ಉನ್ಮುಖನಾಗಿ ನೋಡುತ್ತಿರಲ್ ಶರತ್ಕಾಲದ ಪೂರ್ಣಚಂದ್ರನಂತೆಸೆವ ಕನಕದಂಡ ಮಂಡಿತನಾಗಿ ಅಸಂಖ್ಯಾತಬ್ರಹ್ಮಾಂಡಗಳೇಕಾಧಿಪತ್ಯಮಂ ತೋರ್ಪಡಿಸುತಿರ್ಪ ಶ್ವೇತಚ್ಛತ್ರದಿಂದಲುಂ ಪಾರಿಜಾತರಂಗಸಂಗದಿಂ ಸುರಭಿಶೀತಳಮಾದ ಮಂದಮಾರುತದಿಂ ನರ್ತಿಸುವ ಪಟ್ಟವಸ್ತ್ರದೊಳ್ ಪೊಸಗರುಡನಿಂ ಶೋಭಿತಮಾದ ವಿಜಯಧ್ವಜದಿಂದಲುಂ, ಏಕಕಾಲದೊಳುದಿಸಿದ ಕೋಟಿಸೂರ್ಯರ ತೇಜಮಂ ಪರಿಹಸಿಪ ತೇಜಮುಳ್ಳ ಸೌವರ್ಣಕಲಶಗಳಿಂದಲುಂ ಮಂಜುಶಿಂಜಾರವದಿಂದೊಡಗೂಡಿದ ಚಿನ್ನದ ಘಂಟೆಗಳಿಂದಲುಂ ಚಿನ್ನದ ಗೆಜ್ಜೆಗಳಿಂದಲುಂ ಪೆರ್ಮೆಳಕೆರಗುವ ಮರಿದುಂಬಿಗಳ ಝುಂಕಾರಮಂ ಪೊಂದು, ಅಮ್ಲಾನಮಾದ ಪೂಸರಂಗಳಿಂದಲುಂ ಶೋಭಿತಮಾದ ಆನಂದಮಯಮೆನಿಪ ದಿವ್ಯವಿಮಾನಮಂ ಕಣ್ಣೆವೆಯಿಕ್ಕದೆ ನೋಡುತಿರ್ದ್ದಂ, ಅಗಲ ಸತ್ಯಲೋಕನಿವಾಸಿಗಳಾದ ಸನಕಾದಿಮುನಿಗಳುಂ ಸಕಲದೇವತೆಗಳುಂ ಅತಿಸಂಭ್ರಮದಿಂ ಬಂದು ಗಂಧರ್ವಜಾಲಂ ಕೃತಗಾನದ ವಿಮಾನಮಂ ಕಂಡು ಪರಮಾಶ್ಚರ್ಯದಿಂ ಮೈಮರೆತಿರಲಾಗಿ ಬ್ರಹ್ಮನುಂ ಆಶ್ಚರ್ಯಮೆಂಬ ಕಡಲೊಳ್ ಈಜುತ್ತಲಾನಂದಮೆಂಬ ಮಡುವೊಳ್ ಮುಳುಗುತ್ತ ಭಕ್ತಿಪಾರವಶ್ಯಮೆಂಬ ಗಗನಸ್ಥಳಕ್ಕೈದಿನರ್ತಿಸುತ್ತಲುಂ ಭ್ರಮಿಸುತ್ತಲುಂ ಸ್ನಾನಗೈಯುತ್ತಲುಂ ಬರುವ ಬ್ರಹ್ಮನ ಮುಂದುಗಡೆಯ ಸಮೀಪದೊಳ್ ಸೇನಾನಾಥನುಂ ಭುವನಭೂಷಣಮಾದ ಭಗವಂತನ ವಿಮಾನಮಂ ಸ್ಥಾಪಿಸಿ, " ಎಲೈ ಚತುರಾನನನೇ ! ನಿನ್ನ ಪರಮಭಕ್ತಿಯಿಂ ಪ್ರಸನ್ನನಾದ ನಾರಾಯಣನುಂ, ಪರಮವ್ಯೋಮಮೆನಿಪ ಶ್ರೀವೈಕುಂಠದಿಂದಿಲ್ಲಿಗೆ ಬಿಜಯಂಗೈದಿರುವಂ, ನೀನು ಚಿರಕಾಲದಿಂ ಮಾಡಿದ ತಪಸ್ಸಮಾಧಿಗಳೆಲ್ಲಮುಂ ಇಂದು ಸಫಲಮಾದುದು. ಈ ಭಗವಂತನೇ ನಿನಗೆ ಪರಮಪ್ರಾಪ್ಯನಾಗಿಯುಂ ಸರ್ವಸ್ವನಿಧಿಯೆಂಬಂತೆ ಭೋಗ್ಯನಾಗಿಯುಂ ಅಪಾರಸಂಸಾರಪಾರಾವಾರ ಸಮುತ್ತಾರಕನಾಗಿಯುಂ ಇರುವಂ ಆದುದರಿಂ

ದಿಂ ನಾರಾಯಣನ ಚರಣಾರವಿಂದಮಂ ಎಳದುಳಸಿಯ ತಳಿರುಗಳಿಂದಲುಂ ನಳಿನಾದಿ
ಸುಗಂಧ ಕುಸುಮಗಳಿಂದಲುಂ" ಅರ್ಚಿಸಿ ಆತಪತ್ರ ಚಾಮರಧ್ವಜ ನಾದ್ಯುಪಚಾರಗ
ಳಿಂದುಪಚರಿಸಿ ಕೃತಾರ್ಥನಾಗೆಂದು ಅಮೃತಧಾರಾವರ್ಷದಂತೆ ಮಧುರವಚನದಿಂ
ಪೇಳಲು ಬ್ರಹ್ಮನುಂ ಆಪುರುಷ ಕಾರದ ಕೃತಜ್ಞತೆಯಿಂ ಶ್ರೀನಾರಾಯಣನಂ ನಮಿಸಿ
ಆದಿವ್ಯ ವಿಮಾನದ ಮಧ್ಯದೊಳ್ ಸಕಲಲೋಕ ಶರಣ್ಯವಾಗಿಯುಂ ವಿಷ್ಣುಪ್ರಿಯಾಗಿರು
ವ ಸಕಲ ಸುರ ಸಮೂಹದ ಕಿರೀಟಗಳೊಳ್ ಪೊಳೆವ ರತ್ನಕಿರಣಂಗಳಿಂ ನೀರಾಜಿತವಾ
ದ ಪದ್ಮ ಪೀಠದೊಳ್ ವಿನ್ಯಸ್ತವಾಗಿಯುಂ ಕನಕ ಮಯವಾದ ಕಾಲಂದಿಗೆಗಳೊಳ್
ಪೊಂಕಿಸಿದ ಕಿರುಗೆಜ್ಜೆಗಳ ರವಂಗಳಿಂ ದೊಡಗೂಡಿ ಪಾದಸಂವಾಹನ ಕಾಲದೊಳ್ ಮಧು
ರಧ್ವನಿಗೆಯ್ವ ಲಕ್ಷ್ಮೀದೇವಿಯ ಕರಪಲ್ಲವಂಗಳೊಡನೆ ಅನ್ಯೋನ್ಯವಾಗಿ ಸಲ್ಲಾಪಂ
ಗೆಯ್ವುತಿರೆ ವ ಪಾದಕಮಲಗಳಿಂದಲುಂ ಮದನ ವಿಜಯ ಕಾಹಳೆಯೆಂಬಂತಿರ್ಪ ಜಂ
ಘೆಗಳಿಂದಲುಂ ಕರಿಕರಕರಭ ರಂಭಾಸ್ತಂಭಗಳಂ ಗೆಲ್ದು ಲಾವಣ್ಯ ರಸಪೂರ ಪೂರಿತ
ವಾದ ಊರುಕಾಂಡಂಗಳಿಂದಲುಂ ಕನಕಮಯ ಪೀತಾಂಬರದಿ ಅಲಂಕೃತವಾಗಿ ಕಿರು
ಘಂಟೆಗಳಿಂದಲುಂ ನಿಡುಗೆಜ್ಜೆಗಳಿಂದಲುಂ ಶೋಭಿತವಾದ ಕಾರ್ತಸ್ವರ ಕಟಿಸೂತ್ರ
ದೊಡಗೂಡಿದ ಪವಳ ಸರಗಳ ಪಟ್ಟೆಯಿಂ ಕಟ್ಟಲ್ಪಟ್ಟ ಮುಷ್ಟಿಗ್ರಾಹ್ಯವಾದ ಕಟೀ
ತಟದಿಂದಲುಂ ನಿಜಭುಜಾಂತರ ಸಿಂಬಲೀಲಾ ಸೌಧದೊಳ್ನಿತ್ಯ ನಿವಾಸವಾಗಿರ್ಪ ರ
ಮಾಕಾಂತೆಯು ಮುಡಿಪೀಠದಂತಿರ್ಪ ಕೌಸ್ತುಭ ರತ್ನದಿಂದಲುಂ ಅವಳ ಲೀಲಾರ್ಥವಾ
ದ ನೀಲೋತ್ಪಲದಂತೆ ಶೋಭಿಸುವ ಶ್ರೀವತ್ಸವೆಂಬ ಅಸಾಧಾರಣ ಚಿಹ್ನದಿಂದಲುಂ ಅವ
ಳ ಕೇಳೀ ವಿಸ್ತಾರಕ್ಕೆ ಚಿತ್ರಪಟದಂತೆ ಕಂಠಾವಲಂಬಿತ ವಿಪುಲ ಸ್ಪೃಹಲ ಮುಕ್ತಾಸರನಿ
ಬದ್ಧ ನವರತ್ನ ಪದಕ ಫಲಕದಿಂದಲುಂ ಅಲಂಕೃತವಾದ ವಿಶಾಲವಕ್ಷಸ್ಥಲದಿಂದಲುಂ
ಕಲ್ಪವೃಕ್ಷದ ಶಾಖೆಗಳಂತೆಸೆವ ಕನಕಾಂಗದ ಕಂಕಣಾದ್ಯಲಂಕೃತವಾಗಿ ಅಲಂಕಾರ
ಮಾತ್ರ ಪ್ರಯೋಜನವಾದ ಶಂಖಚಕ್ರಗದಾಭಯ ಮುದ್ರಾವಿರಾಜಿತವಾದ ಚತು
ರ್ಭುಜಂಗಳಿಂದಲುಂ ತತ್ಕ್ಷಣ ಪ್ರಬುದ್ಧ ಕೋಮಲ ಕಮಲದಳದಂತೆ ಸುಂದರವಾಗಿ
ಕರ್ಣಾಂತ ವಿಶ್ರಾಂತವಾಗಿ ಕರುಣಾರಸಪರಿವಾಹದಿಂದೆಸೆವ ನಯನ ಯುಗದಿಂದ
ಲುಂ ಬಿಂಬಾಧರದ ಕಾಂತಿಯಿಂ ಪರಿಚುಂಬಿತವಾದ ಮಂದಹಾಸದ ಕಾಂತಿಯು
ಮೆಂ ಕುರಿಸುತಿರಲ್ ಸಂಧ್ಯಾರಾಗ ಬಂಧುರವಾದ ಬಿಂಬಂಗಳಿಂ ಪಸರಿಸುತ್ತ ಉದಯಾಚ
ಲದಿಂ ದರ್ಶಿತನಾದ ಚಂದ್ರನಂತೆ ಶೋಭಿಸುತ್ತ ಲಲಾಟತಟದಿಂದಲುಂ ಮುಖಕ
ಮಲ ಪರಿಮಳಕೆರಗುವ ಭ್ರಮರ ಪಟಲದಂತಿರುವ ಸುಳಿಗುರುಳುಗಳಿಂದಲುಂ ವಜ್ರ
ವೈಡೂರ್ಯ ಗೋಮೇಧಿಕ ಪುಷ್ಯರಾಗ ಮಾಣಿಕ್ಯ ಮರಕತ ಮೌಕ್ತಿಕ ಮಹೇಂದ್ರ
ನೀಲಾದಿ ನವರತ್ನ ವಿಚಿತ್ರ ಕಿರೀಟ ಮಕುಟ ಮಕರ ಕುಂಡಲಾದ್ಯನೇಕ ವಿಧ ಸು
ಗಂಧ ಸುಖಸ್ಪರ್ಶ ದಿವ್ಯ ಭೂಷಣಂಗಳಿಂದಲುಂ ಸೌಂದರ್ಯಮಯನಾಗಿಯುಂ ಲಾವಣ್ಯ
ಮಯನಾಗಿಯು ಪರಮಾನಂದ ಮಯನಾಗಿಯುಂ ಆಶ್ಚರ್ಯಮಯನಾಗಿಯುಂ ಕರುಣಾ
ಮಯನಾಗಿಯು ವಿ.ಪರ ತಿರುನಾರಾಯಣಸ್ವಾಮಿಯು ಆಪಾದ ಮೌಳಿಪರ್ಯಂತರಂ

ಮತ್ತಂ ವೇದವಿಹಿತವಾದ ಅನೇಕ ದೇವತಾರಾಧನ ರೂಪವಾದ ಯಾಗಾದಿ ಕರ್ಮಗಳೊಳಂ ಪಿತೃದೇವತೆಗಳ ಆರಾಧನವಾದ ಶ್ರಾದ್ಧಾದಿ ಕರ್ಮಂಗಳೊಳಂ ಆವಾವ ದೇವತಾರೂಪದಿಂ ತದಂತರ್ಯಾಮಿಯಾದ ನೀನೇ ಆರಾಧಿಸಲ್ಪಡುವೆ. ಲೋಕದೊಳ್ ರಾಜನಿಗೆ ಮಾಡುವ ಅಂಜಲಿ ನಮಸ್ಕಾರಾದಿಗಳು ರಾಜನಿಗಲ್ಲದೆ ಅವನ ಕವಚಕ್ಕೆ ಸೇರುವುದೆ? ಹಾಗು ಸಕಲ ದೇವತೆಗಳು ನಿನಗೆ ಕಂಚುಕಪ್ರಾಯರಾಗಿರುವರು ಆದುದರಿಂದ ಸಕಲ ದೇವತೆಗಳಿಗೆ ವೇದಂಗಳೊಳ್ ಪೇಳುವ ನಮಸ್ಕಾರಗಳುಂ ನಿನ್ನ ಪಾದಕಮಲದಲ್ಲಿ ಸೇರುವುವು. ಎಲೈ ಸ್ವಾಮಿಯೆ! ಮೋಕ್ಷವನ್ನಪೇಕ್ಷಿಸುವವರು ನಿನ್ನನಲ್ಲದೆ ದೇವತಾಂತರಂಗಳಂ ಆವಾಗಲುಂ ಭಜಿಸುವುದಿಲ್ಲವು. ನಿನ್ನ ಆಜ್ಞೆಯಿಂದಾಯಾ ಅಧಿಕಾರಂಗಳಂ ನಿರ್ವಹಿಸುವರ ಸಕಲ ದೇವತೆಗಳುಂ ಭಜಿಸುವವರ್ಗೆ ಇತರ ಪುರುಷಾರ್ಥಂಗಳಂ ನೀನೇ ಕೊಡುತ್ತಿರುವೆ. ನಾನುಂ ಮಹೇಶ್ವರನುಂ ಮತ್ತಾಂ ನನಗಧೀನರಾಗಿರ್ಪ ಇಂದ್ರಾದಿ ದೇವತೆಗಳು ನಿನ್ನ ದಾಸರಾಗಿಯುಂ ದಾಸದಾಸರಾಗಿಯುಮಿರುವೆವು. ಆದ್ದರಿಂ ನಿನ್ನ ಚರಣಾರವಿಂದದೊಳ್ ಶರಣಾಗತನಾಗಿರ್ಪ ನನ್ನನ್ನು ನನ್ನ ಸಂಬಂಧಿಗಳೆನಿಸುವ ಸಮಸ್ತಮಂ ನಿನ್ನ ಸ್ವತ್ತಾಗಿ ನೀನಂಗೀಕರಿಪುದು ನನಗಂ ನೀನಿತ್ತ ಕರಣಾದಿಗಳಿಂದಲುಂ ನಿನ್ನದಾಗಿ ಸಿದ್ಧಮಾದ ವಸ್ತುಗಳಿಂದಲುಂ ನಿನ್ನನ್ನು ಅರ್ಚಿಸುವೆನೆಂಬ ಮನೋರಥ ಪೊಂದಿರುವುದು. ಅದು ನೀನೇ ಕೈಗೊಂಡು ಪೂರ್ತಿ ಮಾಡಬೇಕೆಂದು ವಿಜ್ಞಾಪಿಸಿದಂ. ಈ ಪ್ರಕಾರವಾದ ಬಿನ್ನಪವಂ ಕೇಳಿ ಕಮಲದಳನಯನನಾದ ನಾರಾಯಣನುಂ ಅತಿಪ್ರಸನ್ನನಾಗಿ ಎಲೈ ಚತುರಾನನನೇ! ನಿನ್ನ ಸ್ತೋತ್ರಮಂ ಕೇಳಿ ನಿನ್ನ ಭಕ್ತಿಯುಂ ಮೆಚ್ಚಿ ನಿನ್ನ ಇಚ್ಛಾನುಸಾರವಾಗಿ ಇಲ್ಲಿರುವೆಂ ನೀನುಂ ಪತ್ತು ಸಾವಿರವಾದ ಯುಗಂಗಳವರೆಗುಂ ಎನ್ನನಾರಾಧಿಸಿ ಅನಂತರದೊಳ್ ನಿನ್ನ ಮಕ್ಕಳು ಮೊದಲಾಗ ಅನಿಬರಿಂದಲುಂ ಭೂಲೋಕದೊಳೆನ್ನಯ ಆರಾಧನವಂ ಮಾಡಿಸುವೆ ಇಂತೆಂದು ಭಗವದಾಜ್ಞೆಯಂ ಶಿರಸಾವಹಿಸಿ ಬ್ರಹ್ಮನುಂ ಸನಕಸನಂದನಾದಿ ಪುತ್ರರಿಂದೊಡಗೂಡಿ ಶ್ರೀಭೂಪತಿಯಾದ ಶ್ರೀಮನ್ನಾರಾಯಣನಂ ಸಹಸ್ರಗುಣವಾದ ನಾನಾವಿಧ ಪರಿಚರ್ಯೆಗಳಿಂ ಪಲವುಕಾಲಮಾರಾಧಿಸುತಿರ್ದ್ದರ್.



ಶ್ರೀ

# ನಾಲ್ಕನೆಯ ಅಧ್ಯಾಯವು.

ವೃ॥ ಮುದವೊಂದುತ್ತೆ ಸನತ್ಕುಮಾರನೆರೆಯುಲ್ ಪದ್ಮಾಕ್ಷವಿಶ್ಲೇಷದಿಂ। ಹೃದ
ಯಂ ದುರ್ಭರವಾಗೆ ಶೋಕಭರದಿಂ ಪದ್ಮಾಸನಂ ಚಿಂತಿಸಲ್ ॥ ಹೃದಯೋ
ದ್ಭೂತಮನೋಜ್ಞಮೂರ್ತಿಯನವಂಗೀಯುತ್ತೆ ಕಾರುಣ್ಯದಿಂ। ಯದುಭೂವಿ
ಧರ ಶೃಂಗದೊಳ್ನೆಲಸಿದಂ ಶ್ರೀಕಾಂತನಾನನ್ದದಿಂ ॥

ಅನಂತರವಲ್ಲಿ ಋಷಿಗಳೆಲ್ಲರುಂ ಸಂತೋಷಯುಕ್ತರಾಗಿ ನಾರದರಂ ಕುರಿತು ಎಲೈ ಸುರಮುನೀಂದ್ರನೇ? ಈ ಭಗವದಾವಿರ್ಭಾವಕಥೆಯಂ ಕೇಳಿ ಕರ್ಣಾನಂದಮಂ ಪೊಂದಿ ಧನ್ಯರಾದೆವು ಆದೊಡಂ ಆ ನಾರಾಯಣಂ ಭೂಲೋಕಕೆ ಬಿಜಯಂಗೈದು ಸಕಲಮನುಜನಯನಗೋಚರನಾಗಿ ಜಗದ್ರಕ್ಷಣಮಂ ಮಾಡಿದ ಕಥೆಯಂ ಪೇಳಬೇಕೆಂದು ವಿಜ್ಞಾಪಿಸಲು ಆ ನಾರದ ನಿಂತೆಂದಂ ಕೇಳಿರೈ ಋಷಿಗಳಿರಾ? ಒಂದಾನೊಂದು ಕಾಲದೊಳ್ ಬ್ರಹ್ಮಪುತ್ರನಾದ ಸನತ್ಕುಮಾರಂ ಸನಕಾದಿಗಳೊಡಗೂಡಿ ಕ್ಷೀರಾಬ್ಧಿ ಮಧ್ಯದೊಳ್ ವಾಸುದೇವನ ಸೇವೆಯೊಳಿರ್ದ್ದು ಅಲ್ಲಿಂದಂ ಸತ್ಯಲೋಕಕೆ ಬಂದು ಅಲ್ಲಿ ಆನಂದಮಯ ದಿವ್ಯವಿಮಾನ ಮಧ್ಯದೊಳ್ ವಿರಾಜಿಸುತಿರ್ದ ಕೋಮಳ ಶ್ಯಾಮಳ ಮಂಗಳಕರ ಸುಂದರತರ ದಿವ್ಯಮೂರ್ತಿಯುಳ್ಳ ನಾರಾಯಣನಂ ಸೇವಿಸಿ ಪರವಶ ಹೃದಯನಾಗಿ ಆ ನಾರಾಯಣನ ಆರಾಧನದೊಳ್ ತದೇಕಾಗ್ರಚಿತ್ತನಾಗಿರುವ ಬ್ರಹ್ಮನಂ ನೋಡಿ ಸಾಷ್ಟಾಂಗವಾಗಿ ಮೈಯ್ಯಿಕ್ಕಿ ಕೈಮುಗಿದು ವಿನಯದಿಂ ತಲೆವಾಗಿನಿಂದು ಇಂತೆಂದನು. ಎಲೈಸ್ವಾಮಿಯೆ? ನಾನು ನಿಮಗೆ ಪುತ್ರನಾಗಿಯುಂ ಶಿಷ್ಯನಾಗಿಯುಂ ಇರುವೆನು. ಪೂರ್ವಕಾಲದಲ್ಲಿ ನೀವೆನಗೆ ಸಕಲವೇದಂಗಳಂ ವೇದಾಂತಂಗಳಂ ಅವುಗಳ ಗೂಢವಾದ ಅರ್ಥವಿಶೇಷಂಗಳಂ ಬೋಧಿಸಿ ಅವುಗಳಲ್ಲಿ ಪೂರ್ವಭಾಗದೊಳ್ ವಿವರಿಸಿದ ಕರ್ಮಸ್ವರೂಪಮಂ ಉತ್ತರಭಾಗದೊಳ್ ವಿವರಿಸಿದ ಪರಬ್ರಹ್ಮಸ್ವರೂಪಮಂ ವಿಶದವಾಗಿ ತೋರ್ಪಡಿಸಿ ಮನದೊಳಿರ್ದ ಸಂಶಯಂಗಳಂ ಪರಿಹರಿಸಿ ಅಜ್ಞಾನವೆಂಬ ಕಗ್ಗತ್ತಲೆಯಂ ಜ್ಞಾನದೀಪಮಂ ತೋರಿ ನಿವಾರಿಸಿದಿರಿ ಮತ್ತಂ ಭಕ್ತಿಮಾರ್ಗಮಂ ಪ್ರಪತ್ತಿಮಾರ್ಗಮಂ ತೋರಿ ಪರಮೋಪಕಾರಮಂ ಮಾಡಿದುದರಿಂದ ತಮಗಿಂತಲುಂ ಹಿತಪರರಾದ ಬೇರೊಂದಾಚಾರ್ಯರಂ ಸಾನರಿ

ಯಿಂ ಆದುದರಿಂದೀಗನಾನುಂ ತಮ್ಮಿಂದಾರಾಧಿಸಲ್ಪಡುತ್ತಿರುವ ಭಕ್ತವತ್ಸಲನಾದ ಭಗವಂತನಂ ಆರಾಧಿಸಬೇಕೆಂದು ಕುತೂಹಲಯುಕ್ತನಾಗಿರುವೆನು. ಆದಕಾರಣದಿಂ ದಿವ್ಯಾನಂದಮಯ ದಿವ್ಯವಿಮಾನಮೆಂಬ ಪೆಟ್ಟಿಗೆಯೊಳಿರ್ಪ ನಾರಾಯಣನೆಂಬ ಮಹಾರ್ಘವಾದ ಮಹೇಂದ್ರ ನೀಲರತ್ನಮಂ ಮನಪೊಲಿದು ಎನಗೆ ತರಬೇಕು. ಪಿತೃಧನಕ್ಕೆ ಪುತ್ರಂ ಭಾಗಿಯಾಗಿರುವನಲ್ಲವೆ? ಈ ಪ್ರಕಾರವಾಗಿ ಸನತ್ಕುಮಾರಂ ಪ್ರಾರ್ಥಿಸಲ್ ಪಿತಾಮಹನುಂ ಕ್ಷಣಕಾಲವಾಲೋಚಿಸಿ, ಈ ಸನತ್ಕುಮಾರ ಪ್ರಾರ್ಥನೆಯುಂ ಸಲಿಸುವುದರಿಂದ ಎನ್ನಿಂದ ಸೃಷ್ಟಿಸಲ್ಪಟ್ಟ ಸಕಲ ಚೇತನರ ಉಜ್ಜೀವನ ವಾಗುವುದು ಎಂದು ನಿಶ್ಚಯಿಸಿ ಸನತ್ಕುಮಾರನಂ ನೋಡುತಿಂತೆಂದಂ ಎಲೈ ಕುಮಾರನೇ! ನಿನಗುಂಟಾದ ಭಗವದ್ಭಕ್ತಿಯಿಂದನಾಂ ಸಂತೋಷಿಸುವೆಂ ಎನಗೆ ಸಾತ್ವಿಕರಾಗಿ ಅನೇಕರಾಗಿ ಪುತ್ರರಿದ್ದಾಗಲುಂ ಭಗವದ್ಭಕ್ತಿ ಭರಿತನಾಗಿರುವುದರಿಂದ ನೀನೆನಗೆ ಅತಿಪ್ರಿಯನಾಗಿರುವಿ, ಲೋಕದೊಳ್ ಜ್ಞಾನಾಧಿಕನಾಗಿಯುಂ ವಿಷ್ಣುಭಕ್ತನಾಗಿಯುಂ ಇರುವ ಪುತ್ರನೇ ಪಿತ್ರಾದಿಗಳಿಗೆ ಪುನ್ನಾಮನರಕದಿಂ ತಪ್ಪಿಸಿ ರಕ್ಷಿಸುವನೆಂದುಂ ಜ್ಞಾನಶೂನ್ಯರಾಗಿ ಅಪಂಡಿತರಾದ ಪುತ್ರರುಂ ಶತ್ರುಪ್ರಾಯರೆಂದು ಬಲ್ಲವರು ಹೇಳುವರು. ಆದುದರಿಂದ ಅನ್ಯರಿಗೆ ದುರ್ಲಭವಾದ ನಿನ್ನ ವಿಷ್ಣುಭಕ್ತಿಗೆ ನಾನು ಮೆಚ್ಚಿದೆನು ಎಂದು ಸನತ್ಕುಮಾರನನ್ನು ಶ್ಲಾಘಿಸಿ ಅವನಿಗೆ ವಿಮಾನವಂ ಕೊಡಲುದ್ಯೋಗಿಸಿ ತತ್ಕ್ಷಣದಲ್ಲಿ ತನಗುಂಟಾಗುವ ಭಗವದ್ವಿರಹವನ್ನು ಸಹಿಸಲಾರದೆ ಜಲಾಶಯದಿಂದೆತ್ತಿದ ಮತ್ಸ್ಯದಂತೆಯುಂ ಎರಡು ಪಕ್ಕದೊಳುರಿಯುವ ಕೊಳ್ಳಿಯಲ್ಲಿರುವ ಇರುವೆಯಂತೆಯುಂ, ತಲ್ಲಣಿಸುತ್ತಲಿರುವ ಬ್ರಹ್ಮನನ್ನು ಭಕ್ತವತ್ಸಲನಾದ ನಾರಾಯಣನು ಕರುಣಾಸಾರ ಶೀತಳವಾದ ಅಪಾಂಗಗಳಿಂದ ಕಟಾಕ್ಷಿಸಿ ಅಮೃತಧಾರೆಯಂ ವರ್ಷಿಸುವಂತೆ ಒಂದಾನೊಂದು ವಾಕ್ಯಮಂ ಹೇಳಿದರು. ಎಲೈ ಕಮಲಾಸನನೇ ಯಾಕೆ ದುಃಖಪಡುವಿ? ನಿನ್ನ ಮನದೊಳುಂಟಾಗಿರುವ ಚಿಂತೆಯಂ ನಾನರಿವೆನು. ಈ ವ್ಯಾಕುಲತೆಯಂ ಬಿಟ್ಟು ಮಹಾಭಾಗ್ಯಶಾಲಿಗಳೊಳಗಗ್ರಗಣ್ಯನಾದ ಸನತ್ಕುಮಾರನೊಡನೆ ಎನ್ನಂ ಕಳುಹಿಸಿ ಭೂಲೋಕದೊಳ್ ನಿನ್ನಿಂದ ಸೃಷ್ಟಿಸಲ್ಪಟ್ಟ ಚೇತನರ ಹಿತಮಂ ನಾಲೋಚಿಸಿ ಈತನ ಮನೋರಥವಂ ಪೂರ್ತಿ ಮಾಡು, ನೀನಾರಾಧಿಸುವುದಕ್ಕೆ ನಮ್ಮ ಹೃದಯೋದ್ಭವವಾದ ಸುಕುಮಾರ ಸುಂದರ ದಿವ್ಯಮೂರ್ತಿಯಂ ಕೊಡುವೆವೆಂದು ಸ್ವಸಂಕಲ್ಪದಿಂದುದ್ಯುಕ್ತರಾಗಿ ಸೌಂದರ್ಯ ಸೌಕುಮಾರ್ಯಾದಿ ಸಕಲ ಗುಣಗಳಿಂ ತನಗನ್ಯೂನಾನತಿರಿಕ್ತವಾದ ರೂಪಮಂ ಕೈಯೆತ್ತಿಕೊಡಲಾ ಪರಮೇಷ್ಠಿಯುಂ ಅತಿಹೃಷ್ಟ ಚೇತನನಾಗಿ ಶ್ರೀಭೂಮಿ ಸಹಿತವಾಗಿರುವ ಭಗವನ್ಮೂರ್ತಿಯಂ ಸಾವಿತ್ರೀ ಸರಸ್ವತಿಗಳೆಂಬ ಪತ್ನಿಗಳೊಡಗೂಡಿ ಭಕ್ತಿಯುಕ್ತನಾಗಿ ಆರಾಧಿಸಿ ಅತ್ಯಂತ ವಿಸ್ಮಯಾನಂದ ಪರವಶನಾಗಿ ಸನತ್ಕುಮಾರನಂ ನೋಡುತಿಂತೆಂದನು. ಎಲೈ ಕುಮಾರನೇ! ಈ ವಿಮಾನವಂ ಪರಿಗ್ರಹಿಸಿ ಭೂಲೋಕವನೈದ

ಅಲ್ಲಿ ದಕ್ಷಿಣದೇಶಕ್ಕಲಂಕಾರವಾಗಿಯುಂ ಪುಣ್ಯಕರವಾಗಿಯುಂ ಶುದ್ಧಸತ್ವಮಯ
ಮೆಂದು ತೋರಿಸುವಂತೆ ಶ್ವೇತಮೃತ್ತಿಕೆಯಿಂ ವ್ಯಾಪ್ತಮಾಗಿಯುಂ ದಿವ್ಯೋದ್ಯಾನ
ದಿವ್ಯತೀರ್ಥಂಗಳಿಂ ಶೋಭಿತವಾಗಿರ್ಪ ಪರ್ವತವೊಂದಿರುವುದು. ಆಪರ್ವತಾಗ್ರ
ದೊಳ್ ಈ ದಿವ್ಯ ವಿಮಾನಮಂ ಸ್ಥಾಪಿಸಿ ಮನೋವಾಕ್ಕಾಯಂಗಳೆಂಬ ತ್ರಿಕರಣಗಳೊ
ಳುಂ ಪರಿಶುದ್ಧನಾಗಿ ಆರಾಧಿಸು. ಶ್ರೀ ವೈಕುಂಠದಿಂದ ಸ್ವಯಂವ್ಯಕ್ತವಾಗಿ ಆವಿ
ರ್ಭವಿಸಿದ ಈದಿವ್ಯ ವಿಮಾನಕ್ಕೆ ವಿಷ್ಣುಭಕ್ತಿ ವಿಹೀನರಾಗಿಯುಂ ವೇದಮಾರ್ಗಮಂ
ಬಿಟ್ಟು ನಡೆವ ನಾಸ್ತಿಕರಾಗಿಯುಂ, ಆಚಾರ ಹೀನರಾಗಿಯುಂ, ಪತಿತರಾಗಿಯು
ಮಿರ್ಪವರ ದರ್ಶನ ಸ್ಪರ್ಶನಾದಿಗಳುಂಟಾಗದಂತೆ ಜಾಗರೂಕನಾಗಿರ್ದು ಸಾತ್ವಿಕ
ರಾದ ಮಹರ್ಷಿಗಳಿಂದೊಡಗೂಡಿ ಬಹುಕಾಲ ಮಾರಾಧಿಸು. ತಿರುವುದೆನಲ್ ಸನತ್ಕು
ಮಾರನು ಅತಿಸಂತುಷ್ಟನಾಗಿ ಈಗ ನಾನು ಧನ್ಯನಾದೆನೆಂದು ಸಾಷ್ಟಾಂಗವಾಗಿ
ನಮಸ್ಕರಿಸಿ ಪುರಾಣ ಪುರುಷನಾದ ನಾರಾಯಣನಿಂದಧಿಷ್ಠಿತವಾದ ಆನಂದಮಯದಿ
ವ್ಯವಿಮಾನವಂ ಸ್ವೀಕರಿಸಿ ಸತ್ಯಲೋಕದಿಂದಿಳಿದು ಬರುವ ಸಮಯದೊಳಾ ವಿಮಾನ
ದ ನಿರವಧಿಕವಾದ ತೇಜದಿಂದಾ ಕನಕಾಚಲ ಶಿಖರದ ಕಾಂತಿಗಳು ಮಂತರಿಸುವಂತಿರೆ
ಅಮರಾವತಿಯೊಳಿರುವ ಪುರಂದರ ಪ್ರಭೃತಿಗಳಾದ ದೇವತೆಗಳುಂ ಅಪ್ಸರೋಗಣಂಗ
ಳುಂ ಈ ದಿವ್ಯವಿಮಾನಮಂ ನೋಡಿ ತಮ್ಮ ಲೋಚನಂಗಳುಂ ನಿರ್ನಿಮೇಷವಾಗಿ
ರ್ದುದಕೆ ಈ ದಿನದೊಳು ಸಾಫಲ್ಯಮುಂಟಾದುದೆಂದು ಸಂತೋಷಿಸಿ ತದ್ವಿಮಾನಮಧ್ಯ
ದೊಳ್ ವಿರಾಜಿಸುವ ನಾರಾಯಣನ ದಿವ್ಯಮಂಗಳ ಮೂರ್ತಿಯ ಸೌಂದರ್ಯ ಶರಧಿ
ಯೊಳಾಳ್ದ ಮಾನಸಗಳೆಂಬಂತಿರುವ ಕಣ್ಗಳಿಂದಾನಂದಾಶ್ರುವಂ ಸುರಿವುತ್ತಂ ಪುಳಕಾಂಚಿ
ತಗಾತ್ರರಾಗಿ ಜಯಶಬ್ದ ಪೂರ್ವಕವಾಗಿ ಪೊಗಳುತ್ತಂ ದೂರದಿಂದಲಾತನ
ವಂದಿಸುತ್ತಂ ತಮ್ಮ ತಮ್ಮ ವಾಹನಾರೂಢರಾಗಿ ವಿಮಾನವಂ ಅನುಸರಿಸಿ ಬರು
ತಿರ್ದರು. ಮತ್ತಂ ಗಂಧರ್ವರುಂ ಅಪ್ಸರಸ್ಸಿದ್ಧ ವಿದ್ಯಾಧರಾದಿಗಳುಂ ಆದಿವ್ಯವಿಮಾ
ನದ ಮುಂದುಗಡೆಯೊಳ್ ಗೀತವಾದ್ಯ ನೃತ್ಯರೂಪಮಾದ ತೌರ್ಯತ್ರಿಕದಿಂನೆರೆ
ದು ಬರುತಿರ್ದರು. ಈ ಪ್ರಕಾರವಾದ ಮಹೋತ್ಸವದಿಂ ದಕ್ಷಿಣಾಭಿಮುಖವಾಗಿ
ಬರುವಸಮಯದೊಳ್ ಶರನ್ಮೇಘ ಮಂಡಲ ಮೇಳ್ವಂತೆ ಪ್ರಕಾಶಿಸುವ ಕೈಲಾಸಪ
ರ್ವತಂ ಕಂಗೊಳಿಸಿದುದು ಆಗಲಾ ಕೈಲಾಸವಾಸಿಯಾದ ಪರಮೇಶ್ವರನುಂ ಭಗವದ್ದಿ
ವ್ಯವಿಮಾನಮಂ ಕಂಡು ಆನಂದ ಪರವಶನಾಗಿ ತಾನು ಕಲ್ಪಾಂತದಲ್ಲಿಯೂ, ಸಂಧ್ಯಾ
ಸಮಯದಲ್ಲಿಯೂ, ನರ್ತನ ಮಾಡುವವನಾದಾಗ್ಯೂ ಭಕ್ತಿರಸವು ಉನ್ಮಸ್ತಕವಾಗಿ
ತತ್ಕ್ಷಣದಲ್ಲಿ ನರ್ತಿಸಲಾರಂಭಿಸಿದನು. ಈ ಪ್ರಕಾರದಲ್ಲಿ ಆದಿವ್ಯವಿಮಾನದ ಮುಂ
ದುಗಡೆಯಲ್ಲಿ ನರ್ತನಮಾಡಿ ಸಮಸ್ತದೇವತೆಗಳಿಗುಂ ಸೇವ್ಯನಾಗಿ ಸರ್ವೇಶ್ವರನಾಗಿ
ರುವ ನಾರಾಯಣನನ್ನು ಸ್ತೋತ್ರಮಾಡಿದನೆಂತೆಂದರೆ ಎಲೈ ಕಮಲಾರಮಣನೇ ?
ನೀನು ಮಹಾ ಯೋಗಿಗಳ ಜ್ಞಾನಮಯವಾದ ದೃಷ್ಟಿಗಳಿಗುಂ ಅಗೋಚರನಾಗಿ

ರ್ದ ಈಗಳೀ ಮನುಜ ಭುವನದೊಳ್ ಅತಿರಮಣೀಯವಾದ ಪುರುಷಾಕಾರದಿಂ ಬಂ
ದು ಸರ್ವಸುಲಭನಾಗಿ ತಿರ್ಯಗ್ಜಾತಿಗಳಿಗುಂ ಸಾಧಾರಣ ಮೆನಿಸುವಂತೆ ಸಕಲ ಮನು
ಜರ ಕಣ್ಣುಗಳಿಗೆ ಗೋಚರನಾಗಿ ಕರುಣಾರಸ ಪರಿಪೂರಿತವಾದ ಕಟಾಕ್ಷದಿಂದವರಂ
ಕಟಾಕ್ಷಿಸಿ ಸಲಹುವೈ! ನಿನ್ನ ದಿವ್ಯಮೂರ್ತಿಯಂ ಸಾಕ್ಷಾತ್ಕರಿಸುವವರ ಕಣ್ಣುಗಳ ಸು
ಕೃತಮಂ ನಾನೆಂತು ಪೊಗಳುವೆ? ಎಲೈ ಮಹಾನುಭಾವನೇ ಸಮುದ್ರದೊಳಿರುವ
ಮರಳು ಗಳನಾದರುಂ ಆಕಾಶದೊಳ್ ಪೊಳೆವ ತಾರಗೆಗಳನಾದರುಂ ಮೇಘದಿಂ ಬೀ
ಳ್ವನೀರ್ ಹನಿಗಳನಾದರುಂ ಲೆಖ್ಖಿಸುವದ ಕಾಗುವುದು. ನಿನ್ನ ನಾಭಿಕಮಲದೊಳು ಪು
ಟ್ಟಿದ ಬ್ರಹ್ಮರುಗಳ ನೆಣಿಸಲಾಗದು. ವಿರಾಟ ಸ್ವರೂಪನಾದ ನಿನ್ನ ರೋಮಾಗ
ಳೊಂದೊಂದರೊಳನೇಕ ಸಹಸ್ರ ಸಂಖ್ಯಾತವಾದ ಬ್ರಹ್ಮಾಂಡಗಳು ತೂಗಾಡುವವು.
ಸಕಲ ವೇದಂಗಳು ನಿನ್ನಂ ಷಡ್ಗುಣ ಪೂರ್ಣನೆಂದುಂ ಜಗತ್ಕಾರಣನೆಂದುಂ ಮೋಕ್ಷ
ಪ್ರದನೆಂದುಂ ದೇವದೇವೋತ್ತಮನೆಂದುಂ ಘೋಷಿಸುವವು. ನೀನು ಅಪರಿಮೇಯಸ್ವ
ರೂಪನಾಗಿರ್ದ್ದುಂ ಸಕಲ ಚೇತನರ ಹೃದಯದೊಳಂತರ್ಯಾಮಿಯಾಗಿರ್ದ್ದು ಅವರಂ
ತತ್ತತ್ಕರ್ಮಂಗಳೊಳ್ ಪ್ರೇರಿಸಿ ತದನುಸಾರವಾಗಿ ಕರ್ಮಫಲಂಗಳಂ ಕೊಡುವಿ.
ಸೂತ್ರಧಾರನು ಸೂತ್ರಮಂ ಪಿಡಿದು ಗೊಂಬೆಗಳ ನಾಡಿಸುವಂತೆ ನೀನುಂ ಬ್ರಹ್ಮನಂ
ತೊಡಗಿ ಸ್ತಂಬಮೊಂ ಅತಿಸೂಕ್ಷ್ಮವಾದ ಕೀಟದ ವರೆಗುಂ ಸಕಲ ಪ್ರಾಣಿಗಳಂ
ಪ್ರೇರಿಸಿ ಲೀಲೆಯಂ ತೋರಿಸುವಿ. ಇಂತು ಆಶ್ಚರ್ಯಕರವಾದ ಗುಣಚೇಷ್ಟಿತಂಗಳಿಂ
ಶರಣಾಗತರಂ ಪೊರೆವ ನಿನ್ನ ಚರಣಾರವಿಂದವಂ ಅಡಿಗಡಿಗೆ ನಮಸ್ಕರಿಸುವೆನು ಎ
ನ್ನಂ ಸಲಹುವುದೆಂದು ಸ್ತೋತ್ರಮಂ ಮಾಡಿ ಸಪರಿವಾರನಾಗಿ ವೃಷಭ ವಾಹನವ
ನೇರಿ ವಿಮಾನವನನುಸರಿಸಿ ಬರುತಿರ್ದ್ದನು. ತದನಂತರದೊಳ್ ಸನತ್ಕುಮಾರಂ
ಮುಂದೆಮುಂದೆ ಬರುತಿರಲು ಚೈತ್ರರಥೋದ್ಯಾನದಿಂದ ರಮ್ಯವಾದ ಅಳಕಾಪುರಂ ಸ
ಮೀಪಿಸಿದುದು. ಅಲ್ಲಿರ್ಪ ವೈಶ್ರವಣನುಂ ಲಕ್ಷ್ಮೀಲೋಲನ ವಿಮಾನವಂ ಸಾಕ್ಷಾತ್ಕ
ರಿಸಿ ಆನಂದಭರಿತನಾಗಿ ನಮಸ್ಕರಿಸಿ ಯಕ್ಷಕುಲದಿಂದೊಡಗೂಡಿ ಅನುಸರಿಸಿ ಬರುತಿ
ರ್ದನು. ಈ ಪ್ರಕಾರದಿಂ ಸಕಲ ದೇವತೆಗಳಿಂದಲುಂ ಸಕಲ ಮುನಿಶ್ರೇಷ್ಠರಿಂದಲುಂ ಕೂ
ಡಿ ಸನತ್ಕುಮಾರನು ಆ ಆನಂದಮಯ ದಿವ್ಯವಿಮಾನಮಂ ಬಿಜುಮಾಡಿಸಿಕೊಂಡು ಬಂ
ದು ಭೂಲೋಕದೊಳಿರ್ಪ ಪರಮ ಪದದಂತೆ ನರನಾರಾಯಣಾಧಿಷ್ಠಿತವಾಗಿಯುಂ
ಯೋಗದಿಂ ಬ್ರಹ್ಮಾನಂದ ಮನನುಭವಿಸುತಿರುವ ಮುನಿಕುಲಂಗಳಿಂ ವ್ಯಾಪ್ತಮಾ
ಗಿಯುಂ ಪರಮ ಪಾವನಮಾಗಿಯುಂ ಅಕೃತ ಸುಕೃತರಿಗೆ ಅಲಭ್ಯವಾಗಿಯುಂ ರಮ
ಣೀಯವಾಗಿಯುಂ ಇರ್ಪ ಉತ್ತರ ಬದರಿಕಾಶ್ರಮಕ್ಕೈದಿ ಆ ದಿವ್ಯಾಶ್ರಮದ ರಾಮ
ಣೀಯಕತೆಯಿಂದಾ ಕೃಷ್ಟಹೃದಯನಾಗಿ ಅಲ್ಲಿ ಸ್ಥಾಪಿಸಿದರು. ಆಗಲಾ ನರನಾರಾ
ಯಣ ಸ್ವಾಮಿಯುಂ ಅರ್ಚಾಸ್ವರೂಪಮಂ ಸಕಲ ಲೋಕಕ್ಕೆ ಮಾರಾಧ್ಯಮಾಬು

ದರು ಭಗವದಾರಾಧನ ಕ್ರಮವಿಶಾತರನೆಂಬುದಂ ಆರಾಧಕನ ಸ್ವರೂಪವಿಂತಿರಬೇಕೆಂ
ಬುದಂ ಲೋಕರುಗಳಿಗೆ ತೋರಿಸುವುದಕ್ಕಾಗಿ ಸರ್ವವಿಧೋಪಚಾರಂಗಳಿಂ ತಾವೇ
ಆರಾಧಿಸಿದರು. ಈರೀತಿಯಿಂದ ಮನುಜಲೀಲಾವಿನೋದದಿಂ ಪರಮಪುರುಷನು ತ
ನ್ನಿಂದತಾನಾರಾಧನಂ ಕೈಗೊಳುತ್ತಲಿಯಾತ್ರಾಮಧ್ಯದೊಳ್ ಮೂರುದಿವಸಪರ್ಯಂತವಿ
ರ್ದನು. ಅನಂತರದಲ್ಲಿ ಸನತ್ಕುಮಾರರು ಅಲ್ಲಿರ್ದ್ದ ಮುನಿಗಳಂ ಕರೆದು ಕೊಂಡು
ದಿವ್ಯವಿಮಾನವಂ ಬಿಜುಮಾಡಿಸಿಕೊಂಡು. ದಕ್ಷಿಣಾಭಿಮುಖರಾಗಿ ಅನೇಕ ಗಿರಿ ನದೀ
ಕ್ಷೇತ್ರಾರಾಮಂಗಳನ್ನತಿಕ್ರಮಿಸಿ ಬರುವಸಮಯದೊಳ್ ಮುಂದೆ ಅತ್ಯುನ್ನತವಾದ ಶಿಖ
ರಗಳಿಂ ಗಗನಮಂಡಲವನಾಕ್ರಮಿಸಿ ನಾನಾವಿಧವೃಕ್ಷಷಂಡಗಳಿಂ ಮೇಘಮಂಡಲದಂ
ತೆ ಸಾಂದ್ರವಾಗಿ ಸಮುನ್ನತಸಾನುಪ್ರದೇಶದಿಂ ಬೀಳ್ವ ನಿರ್ಝರಧ್ವನಿಗಳಿಂದಲುಂ
ನಾನಾವಿಧಪಕ್ಷಿಗಳ ಮಧುರಾರವಂಗಳಿಂದಲುಂ ಹೃದಯಾಹ್ಲಾದಕರವಾಗಿ ದಿವ್ಯತು
ಲಸೀವನಗಳಿಂದಲುಂ ಶುದ್ಧಮೃತ್ತಿಕೆಯ ಘಟ್ಟಗಳಿಂದಲುಂ ಪ್ರಶಾಂತ ಪಾವನವಾಗಿರು
ವ ಒಂದು ಪರ್ವತಮಂ ನೋಡಿ ಈ ಪರ್ವತಮೇ ತನಗೆ ಬ್ರಹ್ಮದೇವರಿಂ ದುಪದೇಶಿಸ
ಲ್ಪಟ್ಟ ಸ್ಥಾನವೆಂದು ನಿಶ್ಚಯಿಸಿ ನಿದಾಘಪೀಡಿತರಾದ ಪಥಿಕರು ಪದ್ಮಸರಸ್ಸಂ ಕಂ
ಡಂತೆಯುಂ ದರಿದ್ರರು ಮಹಾನಿಧಿಯಂ ಕಂಡಂತೆಯುಂ ಪರಮಾನಂದಭರಿತರಾಗಿ ವಿ
ಷ್ವಕ್ಸೇನಾದಿ ಸಕಲ ನಿತ್ಯಸೂರಿಗಳಿಗುಂ ವಂದನೀಯಮಾದ ಪರ್ವತಕ್ಕೆ ದೂರದಿಂದ
ಲೇ ವಂದನಂಗಯ್ದು ಆಪರ್ವತಮನೇರಿ ಅದರ ಶೃಂಗಮಧ್ಯಭಾಗದೊಳ್ ವಿರಾಜ
ಮಾನವಾದ ಮಧುರಶೀತಳ ಪಾವನತೀರ್ಥಂಗಳಿಂ ಮನೋಜ್ಞಮಾಗಿರ್ಪ ವಿಶಾಲ
ವಾದ ಸರೋವರಮಂ ನೋಡಿ ಇದು ಬಹಳ ಪ್ರಶಸ್ತವಾಗಿಯುಂ ರಮಣೀಯವಾ
ಗಿಯುಂ ಕಮಲಭವನಿಗಭಿಮತವಾಗಿಯುಂ ಇರುವ ಸ್ಥಾನವಾದುದರಿಂದ ಇಲ್ಲಿಯೇ ಈ
ವಿಮಾನಮಂ ಸ್ಥಾಪಿಸಿ ಆರಾಧಿಸುವೆನೆಂದು ನಿಶ್ಚಯಿಸಿ ಆ ಸರೋವರದ ದಕ್ಷಿಣಭಾಗ
ದೊಳ್ ಪೂರ್ವಾಭಿಮುಖವಾಗಿ ಸ್ಥಾಪಿಸಿದರು. ತತ್ಕ್ಷಣದೊಳಾ ದಿವ್ಯವಿಮಾನಂ
ಸತ್ಯಲೋಕದೊಳಿರ್ದ್ದ ಪಂಚಲಕ್ಷ ಯೋಜನ ಪರಿಮಿತವಾದ ಮಹೋನ್ನತಿಯಂ
ಸಂಕೋಚಪಡಿಸಿ ಅಲ್ಪವಾದ ಆಕಾರಶಕ್ತಿ ಸ್ವಭಾವಮುಳ್ಳ ಭೂಲೋಕದ ಮನುಜ
ರಿಗೆ ಸುಖಸೇವ್ಯಮಾಗಿರ್ಪಂತೆ ಐದುಪುರುಷ ಪ್ರಮಾಣದಿಂ ತೋರುತ್ತಿರ್ದ್ದುದು.
ಭಕ್ತಪರಾಧೀನನಾದ ಭಗವಂತನುಂ ಬ್ರಹ್ಮಲೋಕಕ್ಕುಚಿತವಾದ ಲಕ್ಷಯೋಜನಪ್ರ
ಮಾಣಮಾದ ರೂಪಮಂ ಸಂಕೋಚಪಡಿಸಿ ಒಂದುಪುರುಷಾಕೃತಿಯಿಂ ವಿಮಾನಮಧ್ಯ
ದೊಳ್ ವಿರಾಜಿಸುತಿರ್ದ್ದಂ ಶಂಖಚಕ್ರಗದಾಶಾರ್ಙ್ಗಾದಿ ದಿವ್ಯಾಯುಧಂಗಳುಂ ಕಿರೀ
ಟಮಕುಟಹಾರಕುಂಡಲಾಂಗದನೂಪುರಾದ್ಯಾಭರಣಂಗಳುಂ ಭಗವಂತನ ರೂಪಾನು
ರೂಪವಾಗಿ ವಿರಾಜಿಸುತ್ತಿರಲು ಸಕಲ ದೇವತೆಗಳುಂ ಋಷಿಜನಂಗಳುಂ ಪರಮಾಶ್ಚ
ರ್ಯಮಂ ಪೊಂದಿ ಶ್ರೀಮನ್ನಾರಾಯಣನು ಅಪರಿಮೇಯ ಸ್ವರೂಪನಾಗಿರ್ದ್ದು ಭಕ್ತ
ವಾತ್ಸಲ್ಯದಿಂ ತನ್ನ ಸ್ವರೂಪಮಂ ಸುಖಸಂದರ್ಶನೀಯಮಾಗಿ ಮಾಡಿ ಲೋಕಮನ

ನರ್ತಿಸುವನೆಂದು ಸಂತೋಷದಿಂ ನರ್ತಿಸುತ್ತಲುಂ ಉತ್ತರೀಯಂಗಳಂ ನೆತ್ತಿಬೀಸು ತ್ತಲುಂ ಮುಖವಿಕಾರಂಗಳಂ ಮಾಡುತ್ತಲುಂ ಆನಂದ ಪರವಶರಾಗಿದ್ದರು. ಆ ಕಾಲದೊಳಾ ಪರ್ವತದೊಳ್ ಚಿರಕಾಲದಿಂ ತಪೋನಿಷ್ಠರಾಗಿದ್ದ ಮಹರ್ಷಿಗಳೆಲ್ಲರುಂ ಸಂತೋಷಿಸಿ ಶ್ರಿಯಃಪತಿಯಾದ ನಾರಾಯಣನು ಶ್ರೀವೈಕುಂಠದಿಂ ಸಾಕ್ಷಾತ್ತಾಗಿ ಇಲ್ಲಿಗೆ ನಡೆತಂದುದರಿಂ ನಮ್ಮಗಳ ಭಾಗ್ಯಕೆಣೆಯಾವುದು ಇರದು. ಈಗ ಇದು ಕಲ್ಯಾಣಮಾದುದೆಂದು ಪೇಳುತಿದ್ದರು. ಆದುದರಿಂದದು ಮೊದಲಾಗಿ ಆತೀರ್ಥಕ್ಕೆ ಕಲ್ಯಾಣೀ ತೀರ್ಥಮೆಂದು ಪೆಸರಾದುದು. ಈಪ್ರಕಾರವಾಗಿ ಸನತ್ಕುಮಾರ ಮುನೀ ಶ್ವರನುಂ ವಿಮಾನಮಂ ಸ್ಥಾಪಿಸಿ ಪಾಂಚರಾತ್ರ ವಿಧಾನದಿಂ ಭಗವಂತನನ್ನಾರಾಧಿಸಿ ಸಕಲ ದೇವತೆಗಳಿಗುಂ ಸಮಸ್ತಮಾದ ಮಹರ್ಷಿಶ್ರೇಷ್ಠರಿಗುಂ ಭಗವತ್ಪಾದ ತೀರ್ಥಮಂ ಪ್ರಸಾದಿಸಲು ದೇವತೆಗಳೆಲ್ಲರುಂ ಪ್ರಸನ್ನಹೃದಯರಾಗಿ ಭಕ್ತಿಭರದಿಂ ತಲೆವಾಗಿ ತಮ್ಮ ಕಿರೀಟರತ್ನ ಕಿರಣಗಳಿಂ ಭಗವಂತನ ಪಾದಪೀಠಮಂ ನೀರಾಜಿಸಿ ಕೈಮುಗಿದು ನಿಂತಿ ರ್ದರ್. ಈಸಮಯದೊಳ್ ನಾರಾಯಣನುಂ ಇವರ ಭಕ್ತಿಪರಿಪಾಕಮಂ ನೋಡಿ ಅಮೃ ತಧಾರೆಯಂತೆ ಆನಂದಕರಮಾಗಿರುವ ಕರುಣಾರಸ ತರಂಗಿತಮಾದ ಅಪಾಂಗಗಳಿಂದಿ ದೇವತೆಗಳಂ ಕಟಾಕ್ಷಿಸುತಿಂತೆಂದರ್. ಕೇಳಿರೈ ದೇವತೆಗಳಿರಾ? ಪೂರ್ವಕಾಲದಲ್ಲಿ ನಾನು ಸಮುದ್ರ ಮಧ್ಯದಲ್ಲಿ ಮುಳುಗಿ ಹೋಗಿರುವಭೂಮಿಯುಂ ಉದ್ಧರಿಸುವುದಕ್ಕೋಸ್ಕರ ವರಾಹ ರೂಪಮಂ ತಳೆದು ದಂಷ್ಟ್ರಾಗ್ರದಿಂದೆತ್ತುವ ಸಮಯದಲ್ಲಿ ನನ್ನಶರೀರದಿಂ ದುಂಟಾದ ಸ್ವೇದೋದಕದಿಂದ ಈ ಕಲ್ಯಾಣೀತೀರ್ಥವು ತುಂಬಲ್ಪಟ್ಟಿತು. ಮತ್ತಂ ವಿಶ್ರಮಾರ್ಥಮಾಗಿ ಇದರ ಪೂರ್ವತೀರದಲ್ಲಿ ನಾನು ಕುಳಿತಿದ್ದೆನು. ಆದಕಾರಣ ದಿಂದ ಈ ತೀರ್ಥವು ಸಕಲ ಪುಣ್ಯತೀರ್ಥಗಳೊಳಗುಂ ಅತಿಪರಿಶುದ್ಧಮಾಗಿರುವುದು. ನೀವುಗಳು ಈತೀರ್ಥ ಪ್ರೋಕ್ಷಣದಿಂ ಉತ್ತಮಾಂಗದೊಳ್ ನಾಲ್ಕಾರು ಬಿಂದುಗಳಂ ಧರಿಸಿದ ಮಾತ್ರದಿಂ ಪುನೀತರಾಗುವಿರಿ. ಮತ್ತಮಾ ಕಾಲದೊಳ್ ಇಲ್ಲಿ ನನ್ನ ಸೇವೆ ಯಂ ಮಾಡುತಿದ್ದ ಭಕ್ತರಿಗೆ ಊರ್ಧ್ವಪುಂಡ್ರಧಾರಣಾರ್ಥವಾಗಿ ವೈನತೇಯನಂ ಎನ್ನಿಂದಾಜ್ಞಪ್ತನಾಗಿ ಶ್ವೇತದ್ವೀಪದಿಂ ಮನೋಹರಮಾದ ಶುದ್ಧಮೃತ್ತಿಕೆಯಂ ತಂ ದು ಈ ತೀರ್ಥದ ಪಶ್ಚಿಮದಿಕ್ಕಿನ ಪ್ರದೇಶದೊಳ್ ಸ್ಥಾಪಿಸಿದಂ ಆ ಮೃತ್ತಿಕಾ ನಿಕ್ಷೇಪ ಮುಂ ನನ್ನಾಜ್ಞೆಯಿಂದ ಅಕ್ಷಯಮಾಗಿ ಬೆಳೆಯುತಿರುವುದು. ಈ ಭೂಮಿಯೊಳೆಲ್ಲಿ ಯುಂ ಶ್ವೇತಮೃತ್ತಿಕೆ ಯಿದ್ದಾಗಲು ಈಮೃತ್ತಿಕೆಯು ಸರ್ವೋತ್ಕೃಷ್ಟವಾಗಿ ಯುಂ ಪರಿಶುದ್ಧವಾಗಿಯುಂ ಇರುವುದು. ಆದುದರಿಂದ ಈ ಕಲ್ಯಾಣೀತೀರ್ಥದಲ್ಲಿ ಸ್ನಾನವಂಮಾಡಿ ಶ್ವೇತಮೃತ್ತಿಕೆಯ ಊರ್ಧ್ವಪುಂಡ್ರಗಳಂಧರಿಸಿ ನನ್ನಲ್ಲಿ ಭಕ್ತಿಯಿಂ ದೊಡನೆಸಂಸಾರಮೆಂಬ ಸಾಗರಮಂ ದಾಂಟಿ ಮುಕ್ತಿಯನ್ನೈದುವಿರಿ. ಮತ್ತು ಈದಿವ್ಯ ಕ್ಷೇತ್ರದಲ್ಲಿ ಯಾವಚೇತನರಾದರುಂ ತಮ್ಮ ತಮ್ಮ ವರ್ಣಾಶ್ರಮಗಳಿಗನುಸಾರವಾಗಿ ನನ್ನ ಸೇವೆಯಂ ಮಾಡುವರೋ ಅವರುಗಳು ತಮ್ಮ ತಮ್ಮ ಇಷ್ಟಾರ್ಥಗಳಂ ನನ್ನ

ಪ್ರಸಾದದಿಂ ಶೀಘ್ರನಾಗಿ ಹೊಂದುವರು. ಈ ಸ್ಥಾನದಲ್ಲಿ ಪಿತೃಗಳಿಗೆ ತಿಲತರ್ಪಣಗಳನ್ನು ಪಿಂಡಪ್ರದಾನಗಳನ್ನು ಮಾಡುವವರಿಗೆ ಪಿತೃದೇವತೆಗಳು ಸಂತುಷ್ಟರಾಗಿ ಆ ವಂಶಕ್ಕೆ ಉತ್ತಾರಕರಾಗಿಯೂ, ಪುಣ್ಯಶಾಲಿಗಳಾಗಿಯೂ, ತತ್ವಜ್ಞಾನಯುಕ್ತರಾಗಿಯೂ, ವಿಷ್ಣುಭಕ್ತಿಯುಕ್ತರಾಗಿಯೂ ಇರುವ ಪುತ್ರಪೌತ್ರಾದಿಗಳನ್ನು ಕೊಡುವರು. ಈ ತೀರ್ಥದಲ್ಲಿ ಯಜ್ಞಾದಿಗಳಂ ಮಾಡುವವರಿಗೆ ಸಹಸ್ರಗುಣವಾದ ಫಲವು ಸಿದ್ಧಿಸುವುದು. ಇದಲ್ಲದೆಯೂ ಅವರಿಗೆ ನನ್ನ ನಿರ್ಹೇತುಕವಾದ ಕಟಾಕ್ಷದಿಂ ಮೋಕ್ಷಫಲವು ಲಭಿಸುವುದು. ಮತ್ತು ವಿಶಾಖಕ್ಷೇತ್ರದಲ್ಲಿ ಯಾರು ಅನನ್ಯಪ್ರಯೋಜನರಾಗಿ ನನ್ನ ಸೇವೆಯಂ ಮಾಡುವರೋ ಅವರಿಗೆ ನಾನೇ ಫಲಪ್ರದನಾಗಿಯೂ, ಫಲಭೂತನಾಗಿಯೂ ಇರುವೆನು. ಈ ಕಲ್ಯಾಣೀತೀರದಲ್ಲಿ ಗೋದಾನ ಭೂದಾನ ವಸ್ತ್ರದಾನ ಕನ್ಯಾದಾನ ಮೊದಲಾಗಿರುವ ನಾನಾವಿಧದಾನಗಳಂ ಮಾಡಿದವರು ಈ ಲೋಕದಲ್ಲಿರುವವರೆಗೂ ಪುತ್ರಪೌತ್ರಾದಿಗಳೊಡನೆ ಸಕಲವಿಧವಾದ ಐಶ್ವರ್ಯಗಳನ್ನನುಭವಿಸಿ ಅನಂತರದಲ್ಲಿ ಉತ್ತಮ ಲೋಕವಂ ಹೊಂದುವರು. ಇಲ್ಲಿ ಏಕಾದಶಿಯೇ ಮೊದಲಾದ ವ್ರತಂಗಳಂ ಮಾಡುವವರು ಬ್ರಹ್ಮಲೋಕಕ್ಕೆ ಹೋಗಿ ಬ್ರಹ್ಮಸಭೆಯೊಳ್ ಆನಂದಿಸುವರು. ಆಯುರಾರೋಗ್ಯೈಶ್ವರ್ಯ ಸತ್ಸಂತಾನಾದಿ ಕಾಮ್ಯಫಲಗಳೊಳ್ ಯಾವಯಾವ ಫಲಗಳನ್ನಪೇಕ್ಷಿಸಿ ನನ್ನಂ ಈ ಪರ್ವತದಲ್ಲಿ ಸೇವಿಸಿದವರಿಗೆ ಆಯಾ ಇಷ್ಟಾರ್ಥಸಿದ್ಧಿಗಳು ಕ್ಷಿಪ್ರದಲ್ಲುಂಟಾಗುವುದು. ಮತ್ತಂ ಫಾಲ್ಗುನ ಮಾಸದ ಪೂರ್ಣಮಾಸ್ಯೆಯಲ್ಲಿ ನಾನು ಈ ಕ್ಷೇತ್ರದೊಳ್ ಸಾನ್ನಿಧ್ಯವಂ ಮಾಡಿದೆನು. ಆದುದರಿಂದೀ ಪೂರ್ಣಮಾಸ್ಯೆಯು ಇತರ ಪೂರ್ಣಮಾಸ್ಯೆಗಳಿಗಿಂತ ಅತಿಶ್ರೇಷ್ಠವಾದದ್ದು. ಓ ದೇವತೆಗಳಿರಾ! ನೀವುಂ ಪ್ರತಿವರ್ಷಗಳೊಳ್ ಆ ಪೂರ್ಣಮಾಸಿಯೊಳಿಲ್ಲಿಗೆ ಬಂದು ನನ್ನ ಸೇವೆಯಂ ಮಾಡಿ ಸಂಸಾರದುಃಖವಂ ಬಿಟ್ಟು ಅಪುನರಾವೃತ್ತಿ ಲಕ್ಷಣವಾದ ಮೋಕ್ಷವನ್ನು ಹೊಂದುವಿರೆಂದು ಶ್ರೀಮನ್ನಾರಾಯಣನ ವಾಕ್ಯಮಂ ಕೇಳಿ ಪುರಂದರ ಪ್ರಮುಖರಾದ ದೇವತೆಗಳು ಸಂತುಷ್ಟ ಹೃದಯರಾಗಿ ತಮ್ಮ ತಮ್ಮ ಸ್ಥಾನಗಳನ್ನೈದಿದರು. ಅನಂತರದಲ್ಲಿ ಸನತ್ಕುಮಾರರುಂ ನಾನು ಮೊದಲಾದ ಅನೇಕ ಋಷಿಗಳಿಂದೊಡಗೂಡಿ ಅನನ್ಯಪ್ರಯೋಜನರಾಗಿ ನಿರುಪಾಧಿಕಫಲವಾದ ಮೋಕ್ಷೈಕನಿರತರಾಗಿ ಪರಮಭಕ್ತಿಯಿಂ ಬಹುಕಾಲಮಾರಾಧಿಸುತಿರ್ದರು. ಈ ಪ್ರಕಾರವಾಗಿ ಸಕಲದೇವತೆಗಳಿಗುಂ ಸ್ವಾಮಿಯಾಗಿ ತ್ರೈಲೋಕ್ಯ ಪುಣ್ಯಪರಿಪಾಕ ಸ್ವರೂಪನಾಗಿ ಲಕ್ಷ್ಮೀನಯನ ಚಕೋರಾನಂದ ಚಂದ್ರನಾಗಿ ಅಪೌರುಷೇಯವಾದ ವೇದಂಗಳಿಗೂ ಅಗೋಚರನಾಗಿರುವ ಪರಾತ್ಪರನೆನಿಸುವ ಪರಮಪುರುಷನು ಯುದುಗಿ ತಟಸ್ಥೋಳಿರುವ ಸಕಲಪ್ರಾಣಿಗಳುಂ ಸುಕೃತವಶದಿಂ ಕಾದಾಚಿತ್ಕವಾಗಿ ಈ ಪರ್ವತಕ್ಕೆ ಬರುವ ಸಕಲಚೇತನರುಂ ಕಂಡನುಭವಿಸುವಂತೆ ಸರ್ವಸುಲಭನಾಗಿ ದಯಮಾಡಿರ್ದನು.

ಶ್ರೀಃ

## ೫ ನೇ ಅಧ್ಯಾಯಂ

॥ಸ್ರಗ್ಧರಾ॥ ಸಾಕ್ಷಾದ್ಗಂಗಾ ಮುಖೋಕ್ತ್ಯಾಪ್ರಥಿತವಿಭವ ಕಲ್ಯಾಣತೀರ್ಥಾವಗಾಹ
ಪ್ರಕ್ಷೀಣಾಶೇಷದೋಷೋದ್ಯಸುಚರಿತಸಂಭೂತಭಕ್ತಿಪ್ರರೋಚಾದ್ವಿಪ್ರಾ
ನ್ಸ್ವಸ್ತ್ಯಾದನಶ್ರಾಂತ್ಯಲಸಗತಿಸಮಾಕ್ರಾಂತತತ್ತದ್ವ್ಯಪೋದ್ಯದ್ವಿಕ್ಷಾರತ್ನೌಘ
ದಾನಪ್ರತನಿರತರಮಾನಾಥನಿಂ ಪಾಲಿಸಿಮ್ಮಂ॥

ಅನಂತರದಲ್ಲಿ ವ್ಯಾಸಾದಿಮುನಿಗಳ್ ಅತಿಸಂತೋಷಯುಕ್ತರಾಗಿ ನಾರದರೆಂಕುರಿತು
ಎಲೈ ಸುರಮುನೀಂದ್ರನೆ! ಭಗವಂತನು ಭೂಲೋಕಕ್ಕೆ ದಯಮಾಡಿದ ಕಥೆಯಂ ನೀ
ನರುಹಿದುದರಿಂದ ನಾವು ಕೃತಾರ್ಥರಾದೆವು. ಮತ್ತಮಾ ಪುಣ್ಯಕ್ಷೇತ್ರದೊಳಿರುವ ಶ್ವೇ
ತಮೃತ್ತಿಕೆಯ ಅತಿಶಯವು ವ್ಯಕ್ತವಾಗಿ ತಿಳಿಯಿತು. ಆ ತೀರ್ಥಕ್ಕೆ ಕಲ್ಯಾಣತೀರ್ಥ
ವೆಂದು ಪೆಸರಾದುದಕೆ ಕಾರಣಮಂ ನರಿತೆವು. ಪರೋಪಕಾರರೂಪಿಯಾದ ಭಗವಂತನ ಚರಿತ್ರವು
ನಮ್ಮ ಕಿವಿಗಳಿಗೆ ಆನಂದಕರವಾದುದು. ಆದರೆ ಮತ್ತೊಂದು ಸಂಶಯಾ ಮನದೊಳಂ
ಕುರಿಸಿರುವುದು. ಅದಾವುದೆಂದರೆ ಲೋಕದೊಳ್ ಗಂಗಾತೀರ್ಥವೇ ಸರ್ವೋತ್ಕೃಷ್ಟ
ವಾದುದೆಂದು ವೇದಂಗಳು ಪುರಾಣಗಳುಂ ಪೊಗಳುವುದು. ಸ್ವರ್ಗಮರ್ತ್ಯಪಾತಾಳ
ಗಳೆಂಬ ಮೂರುಲೋಕದೊಳಂ ಆ ತೀರ್ಥಂ ಪಾವನವೆಂದು ಬಲ್ಲವರುಂ ಕೊಂಡಾಡು
ವರು. ಇಂತಿರಲು ಆ ನಾರಾಯಣನೇ ಸಾಕ್ಷಾತ್ತಾಗಿ ದೇವತೆಗಳಿಗೆ ಕಲ್ಯಾಣೀತೀರ್ಥ
ಮುತ್ಕೃಷ್ಟವೆಂದು ಉಪದೇಶವಂ ಮಾಡಿದನೆಂದು ನೀವರುಹಿದಿರಿ. ಗಂಗೆಗಿಂತಲುಂ
ಕಲ್ಯಾಣಿಗೆ ಅತಿಶಯವೆಂತಾದುದಾ ವೈಭವಮಂ ವಿಸ್ತಾರವಾಗಿ ಬಣ್ಣಿಸಿ ನಮ್ಮ ಸಂದೇ
ಹಮಂ ಪರಿಹರಿಸಬೇಕೆಂದು ಬಿನ್ನೈಸಲ್ಕಾ ನಾರದನಿಂತೆಂದಂ. ಓ ಋಷಿಗಳಿರಾ?
ಇದಕ್ಕಾಗಿ ಒಂದು ಇತಿಹಾಸವುಂಟು. ಅದಂ ಕೇಳಿದೊಡೆ ಆ ತೀರ್ಥದ ಸಕಲವಿಧವಾದತಿ
ಶಯಂಗಳುಂ ನಿಮಗೆ ಹೃದಯಂಗಮವಾಗುವುದು. ಪೂರ್ವಕಾಲದೊಳು ಸುಚರಿತನೆಂ
ಬ ಬ್ರಾಹ್ಮಣಂ ಮಹಾತಪಸ್ವಿಯಾಗಿಯು ವಿಷ್ಣುಭಕ್ತನಾಗಿಯು ಇರ್ದಂ. ಆತಂಗೆ
ಸುಶೀಲೆಯೆಂಬ ಸತಿಯುಂ ಸುಮತಿ ಸುವೃತ್ತಿಗಳೆಂಬ ಈರ್ವರ್ ಕುಮಾರರು ಇರ್ದ
ರು. ಆ ಬ್ರಾಹ್ಮಣನು ಸದಾಚಾರ ಸಂಪನ್ನನಾಗಿ ವೇದೋಚಿತವಾದ ಕರ್ಮಂಗಳಂ
ಅನೇಕ ವ್ರತೋಪವಾಸಂಗಳಂ ಮಾಡುತಿರ್ದು ಒಂದಾನೊಂದು ಸಮಯದೊಳ್ ತೀ
ರ್ಥಯಾತ್ರೆಯಂ ಮಾಡಬೇಕೆಂಬ ಉದ್ದೇಶದಿ ಪತ್ನೀಪುತ್ರರುಗಳೊಡನೆ ಪೊರಮಟ್ಟು
ದಕ್ಷಿಣ ದೇಶದೊಳಿರುವ ಕಾವೇರೀತುಂಗಭದ್ರಾ ತಾಮ್ರಪರ್ಣೀ ಕೃಷ್ಣಾ ಗೋದಾವರೀ

ನರ್ಮದಾ ಶೋಣಾ ಕ್ಷೀರನದೀ ಸೇತು ಮೊದಲಾದ ತೀರ್ಥಂಗಳೊಳ್ ಸ್ನಾನವಂ ಮಾಡಿ ಶ್ರೀರಂಗಕ್ಷೇತ್ರ ವೆಂಕಟಾಚಲ ಹಸ್ತಿಗಿರಿ ಪುರುಷೋತ್ತಮ ಕ್ಷೇತ್ರ ಘಟಿಕಾಚಲ ಭದ್ರಾಚಲ ಶ್ರೀಮುಷ್ಣ ಗೋಕರ್ಣಾ ನಂತಶಯನ ಮೊದಲಾದ ವಿಷ್ಣುಕ್ಷೇತ್ರಂಗಳೊಳ್ ಭಗವತ್ಸೇವೆಯಂ ಮಾಡಿ ಅಜ್ಞಾನವಶದಿಂದ ಆ ದಕ್ಷಿಣದೇಶದೊಳ್ ಪ್ರಸಿದ್ಧವಾಗಿರುವ ನಾರಾಯಣಗಿರಿಯಂ ನರಿಯದೆ ಅಲ್ಲಿರ್ಪ ಭಗವತ್ಸೇವೆಯಂ ಕಲ್ಯಾಣೀ ಸ್ನಾನವಂ ತೊರೆದು ಅತಿತ್ವರೆಯಿಂ ಗಂಗಾಯಾತ್ರೆಯಂ ಮಾಡವೆನೆಂದುತ್ತರ ದೇಶಕ್ಕೆ ಪೋಗಿ ಅಲ್ಲಲ್ಲಿರ್ಪ ಪುಣ್ಯತೀರ್ಥಂಗಳೊಳ್ ಮಿಂದು ಗಂಗಾತೀರವಂ ಸೇರ್ದನು. ಆಗಲಾ ವಿಪ್ರನು ತನ್ನ ನಾಮಕ್ಕನುಗುಣವಾಗಿ ಬಹುಸುಕೃತವುಳ್ಳವನಾಗಿದ್ದರು ವಾತನಕಣ್ಣಿಗೆ ಗಂಗೆಯು ಗೋಚರವಾಗದೆ ಅದೃಶ್ಯವಾದಳು. ತತ್ಕ್ಷಣದೊಳಾ ಬ್ರಾಹ್ಮಣನು ಕಳವಳಗೊಂಡು ಅಲ್ಲಿ ಬರುತಿರ್ಪ ಬ್ರಾಹ್ಮಣರಂ ಕಂಡು ಗಂಗೆಯು ಯೆಲ್ಲಿರುವುದೆಂದು ಕೇಳಲಾ ಭೂಸುರರುಂ ಎಲೈ ವಿಪ್ರನೆ ಭಗವಚ್ಚರಣಾರವಿಂದದಿಂ ನಿಸ್ಸೃತವಾಗಿ ಶಂಕರ ಜಟಾಭರಣವಾಗಿ ಮೂರುಲೋಕವಂ ಪರಿಶುದ್ಧವಾಗಿ ಮಾಡುವಗಂಗೆಯು ನಿನ್ನ ಮುಂದುಗಡೆಯಲ್ಲಿಯೇ ಪ್ರವಹಿಸುವುದಂ ನೀನು ಕಾಣಲಿಲ್ಲವೆ ? ಅಗೋ ನೋಡೆಂದು ಕೈಯಿಂ ನಿರ್ದೇಶಿಸಿ ತೋರಿದಾಗಲುಂ ಪ್ರವಾಹವೇಗವಂ ಶಿಲಾ ಶಿಖರ ಸಂಘಟ್ಟನದಿಂದಾದ ಝುರ್ಝರ ಧ್ವನಿಗಳಂ ಶೀತಳವಾತಾಹತವಾದ ತೆರೆಗಳ ಘುಳುಘುಳು ಧ್ವನಿಗಳಂ ಸ್ನಾನಾರ್ಥವಾಗಿಳಿದು ತಾರಧ್ವನಿಗಳಿಂದಾ ವೃತವಾದ ಹರಿನಾಮಕೀರ್ತನಧ್ವನಿಗಳಂ ಕಿವಿಗೊಟ್ಟು ಕೇಳುತಿರ್ಪಾಗಲುಂ ಗಂಗಾಪ್ರವಾಹವಂ ಕಾಣದ ಮಾತ್ರವಲ್ಲದೆ ಸ್ನಾತೋತ್ಥಿತರಾದ ಮನುಜರ ಮೈಯೊಳನುಷಕ್ತವಾದೊಂದು ಜಲಬಿಂದುವಂ ಸ್ನಾನವಸ್ತ್ರವಂ ಹಿಂಡುವಾಗ ಬೀಳ್ವುದೊಂದುವ ಯಶಿಕೆಯಂ ಕಾಣದೆ ಆ ಸುಚರಿತನು ಅತಿದುಃಖಿತನಾಗಿ ಆಹಾ ಎನ್ನದೌರ್ಭಾಗ್ಯ ವೈಗ್ಗಿಯಿಂದಿಂತಾದುದು ಮಂದಾಕಿನಿಯು ಮುಂದಿರುವುದೇ ದಿಟವೆಂದರಿದು ಅತಿಖಿನ್ನನಾಗಿ ಗಂಗೆಯಂ ಕುರಿತು ಎಲೈ ತ್ರಿವಿಕ್ರಮ ಚರಣಾರವಿಂದಮಕರಂದಧಾರೆಯೇ ನೀನು ಸಕಲ ಮುನಿಜನ ಮಧುಕರಂಗಳ ನಾನಂದಪಡಿಸಿ ಮೂರುಲೋಕಂಗಳಂ ಪಾವನವಾಗಿಮಾಡಿ ಮನುಜ ಭುವನದೊಳ್ ನಿನ್ನಂ ಸೇವಿಸುವವರ ತಾಪತ್ರಯವಂ ಶಮನವಮಾಡಿ ಸಂಸಾರ ಬಂಧವಂ ಬಿಡಿಸುವೈ ನಾನು ಮತ್ಯಂತ ದೇಶ ಸಂಚಾರದಿಂ ಖಿನ್ನನಾಗಿ ಬಹುಕಾಲದಿಂ ನಿನ್ನಸೇವೆಯಂ ಮಾಡಬೇಕೆಂಬ ಮನೋರಥದಿಂ ಬಂದಿರುವೆನು. ಕರುಣಾಶಾಲಿನಿಯಾದ ನೀನು ಶರಣಾಗತನಾದವನಿಗೆ ನಿಜಸ್ವರೂಪವಂ ತೋರಿಸಲಹಬೇಕೆಂದು ಪ್ರಾರ್ಥಿಸಲು ಗಂಗೆಯು ಬ್ರಾಹ್ಮಣನ ದೈನ್ಯವಂ ನೋಡಿ ಮಂಗಳಕರವಾಗಿಯುಂ ಸುಂದರತರವಾಗಿಯು ಮಿರುವ ಒಂದು ಕನ್ಯಾರೂಪವಂ ತಳೆದು ನೀಲೋತ್ಪಲದಳದಂತೆ ದೇಹಕಾಂತಿಯುಂ ಕನ್ಯಾಸ್ವರೂಪಿಣಿಯಾದ ತನ್ನಸಖಿಯಾದ

ಯಮುನಾನದಿಯುಂ ದೊಡಗೂಡಿ ಬ್ರಾಹ್ಮಣನಮುಂದೆ ಬಂದು ನಿಂದು ಇಂತೆಂದಳು ಎಲೈ ಬ್ರಾಹ್ಮಣನೆ ನೀನು ಯಾರು ಎಲ್ಲಿಂದ ಬಂದಿರುವಿ ನಿನ್ನ ಮುಖದೊಳ್ ಕಾಂತಿಯಿಲ್ಲದೆ ಶೋಕಪಡುವಂತೆ ತೋರುತಿರುವಿ ನಿನ್ನ ದುಃಖಕ್ಕೆ ಕಾರಣವೇನೆಂದು ಅತಿ ಪ್ರೀತಿಯಿಂ ಮಧುರವಚನದಿಂ ಬೆಸಗೊಳ್ಳಲು ಆ ಸುಚರಿತನುಂ ಸಂತೋಷಪಟ್ಟು ಎಲೈ ಕನ್ಯಾರತ್ನವೇ ನಾನು ಸಕುಟುಂಬವಾಗಿ ತೀರ್ಥಯಾತ್ರೆಗೆ ಬಂದು ಬಹುದೂರದೇಶದಿಂ ಗಂಗಾಸ್ನಾನಾರ್ಥವಾಗಿ ಬಂದೆನು ನನ್ನ ದೌರ್ಭಾಗ್ಯದಿಂ ಗಂಗೆಯಂ ಕಾಣದೆ ದುಃಖಿಸುವೆನು ದುರ್ಬಲೆಯಾದ ಸತಿಯುಂ ಬಾಲರಾದ ಮಕ್ಕಳಂ ಕರೆದುಕೊಂಡು ಬಹುದಿನ ಪ್ರಯಾಣದಿಂ ಬಳಲಿಬಂದ ನನ್ನ ಶ್ರಮಗಳೆಲ್ಲಮುಂ ವ್ಯರ್ಥವಾಗಿ, ಲೋಕದೊಳ್ ಕಡುಪಾಪಿಯೆಂಬ ಪೆಸರನೆತ್ತಿ ಜೀವಿಸುವುದಕ್ಕಿಂತಲುಂ ಮತ್ತೊಂದು ವ್ಯಸನವು ಯಾವುದೆಂದು ಪೇಳಲಾಗಿ ಆ ಕನ್ನಿಕೆಯು ಎಲೈ ಬ್ರಾಹ್ಮಣನೇ ಆ ಗಂಗೆಯ ಸ್ವಭಾವವಂ ನೀನರಿಯೆ ಅವಳು ಪಾಪವಮಾಡಿದವರ ಕಣ್ಣಿಗೆ ಗೋಚರವಾಗುವದಿಲ್ಲವು ನಿನ್ನಲ್ಲಿ ಯಾವದೊಂದು ಮಹಾಪಾತಕವು ಇದ್ದೀತೆಂದು ಹೇಳಿದ ವಾಕ್ಯಮಂ ಕೇಳಿ ತಿರುಗಿಯುಂ ಬ್ರಾಹ್ಮಣನು ಹೇಳಿದನು, ಎಲೈ ಕನ್ನಿಕೆಯೇ ನಿನ್ನ ವಚನವು ನನಗೆ ಆಶ್ಚರ್ಯವು ಉಂಟುಮಾಡುವದು, ಲೋಕದಲ್ಲಿ ಗಂಗೆಯು ಅವತರಿಸಿರುವದು ಯಾತಕ್ಕೆ ? ನೀನೇ ಯೋಚಿಸು ಪಾಪಿಷ್ಠರ ಪಾಪಗಳೆಲ್ಲವು ತೊಳೆಯುವದಕ್ಕೋಸ್ಕರವೇ ಭಗವಂತನ ಚರಣದಿಂದುದ್ಭೂತೆಯಾಗಿ ದಿವ್ಯಲೋಕದಿಂ ಭೂಮಿಯೊಳವತರಿಸಿ ಜಗತ್ಪಾವನಿಯೆಂಬ ಬಿರುದಂವಹಿಸಿದ ಗಂಗೆಯು ಪಾಪಿಷ್ಠರ ಕಣ್ಣಿಗೆ ಗೋಚರವಾಗದಪಕ್ಷದಲ್ಲಿ ಪಾಪಕ್ಷಯವಾಗುವ ಮಾರ್ಗವ್ಯಾವದು ? ಪಾಪಸಂಬಂಧವಿಲ್ಲದೆ ಕೇವಲ ಪುಣ್ಯಶಾಲಿಗಳಿಗೆ ಗಂಗೆಯಿಂದ ಯಾವಪ್ರಯೋಜನ ವಿರುವುದು ? ಆದುದರಿಂದ ನಾನು ಪಾಪಿಯಾಗಿದ್ದರೆ ಆ ಗಂಗೆಯೇ ನನಗೆ ದರ್ಶನವಂ ಕೊಟ್ಟು ನನ್ನ ಪಾಪವ ಪರಿಹರಿಸಿ ತನ್ನ ಬಿರುದಂ ಕಾಪಾಡಿಕೊಳ್ಳಬೇಕೆಂದು ವಿನಯದಿಂ ಪೇಳಲು ಆ ಗಂಗೆಯು ಬ್ರಾಹ್ಮಣನ ವಚನ ಚಾತುರ್ಯದಿಂ ಕಟ್ಟಲ್ಪಟ್ಟವಳಾಗಿ ಇಂತೆಂದಳು ಎಲೈ ಎಲೈ ವಿಪ್ರವರ್ಯನೇ ? ನಾನು ಗಂಗೆಯು ಇವಳೇ ನನ್ನ ಸಖಿಯಾದ ಯಮುನಾನದಿಯು ನಿನ್ನಂ ಪರೀಕ್ಷಿಸುವದಕ್ಕಾಗಿಯೂ, ನಿನಗೆ ಹಿತವ ಮಾಡುವದಕ್ಕಾಗಿಯುಂ ಅಂತರ್ಧಾನವನೈದಿರುವೆನು ನಿನಗೆ ಅಜ್ಞಾನದಿಂದುಂಟಾದ ಪಾಪವು ಯಾವದೆಂದರೆ ದಕ್ಷಿಣ ದೇಶದಲ್ಲಿ ಆಯಾಯ ತೀರ್ಥಗಳೊಳಗೆ ಸ್ನಾನವಂ ಮಾಡಿ ಕ್ಷೇತ್ರಗಳೊಳ್ ಭಗವತ್ಸೇವೆಯಂ ಮಾಡುವ ಸಮಯದಲ್ಲಿ ಪ್ರಸಿದ್ಧವಾದ ಯಾದವಾದ್ರಿಯೊಳಿರುವ ಕಲ್ಯಾಣೀತೀರ್ಥದೊಳ್ ಸ್ನಾನವಮಾಡದೆ ತತ್ತೀರಗತವಾದ ವಿಮಾನಮಧ್ಯದೊಳ್ ವಿರಾಜಮಾನನಾದ ನಾರಾಯಣನ ಸೇವೆಯುಂ ಮಾಡದೆ ಅತಿಕ್ರಮಿಸಿ ಬಂದುದರಿಂದ ನಿನಗೆ ಅಪರಿಹಾರ್ಯವಾದ ಪಾಪ ಸಂಘಟಿಸಿದುದು, ಅನೇಕ ಕ್ಷೇತ್ರಯಾತ್ರಾದಿಗಳಿಂದುಂಟಾದ ಪುಣ್ಯರಾಶಿಯೆಲ್ಲವು ಒಂದು ಪುಣ್ಯತೀರ್ಥಮನುಲ್ಲಂಘಿಸಿದ ಪಾಪಂ ಪಾಲ್ಗೊಡದೊಳ್ ಸೇರಿದ ವಿಷಬಿಂದು

ವಿನಂತಿ ಕೇಳಿಸುವುದು. ಎಲೈ ಬ್ರಾಹ್ಮಣನೆ ಆಕಲ್ಯಾಣೀತೀರ್ಥವು ಎನಗಿಂತಲೂಂ ಮತ್ತೆಲ್ಲಾ ತೀರ್ಥಗಳಿಗಿಂತಲೂಂ ಉತ್ಕೃಷ್ಟವೆಂಬುದಂ ನೀನರಿಯೆಯಾ ? ನಾನುಂ ಬ್ರಹ್ಮನ ಕಮಂಡಲುವಿನೊಳಿದ್ದು ತ್ರಿವಿಕ್ರಮನ ಪಾದಾಂಗುಷ್ಠದ ಸಂಬಂಧ ಮಾತ್ರದಿಂದ ಸರ್ವಲೋಕದೊಳತಿಶಯವಾದ ಮಹಿಮೆಯಂ ಪಡೆದಿರುವೆನು. ಆ ತೀರ್ಥವೆಂದರೆ ವರಾಹರೂಪಿಯಾದವನ ಸರ್ವಾಂಗದೊಳ ಪುಟ್ಟಿದ ತೀರ್ಥದಿಂ ಪೂರಿತವಾಗಿರುವುದು. ಅದರ ತೀರದಲ್ಲಿ ಸಾಕ್ಷಾನ್ನಾರಾಯಣಂ ನಿತ್ಯಸನ್ನಿಹಿತನಾಗಿರುವನು. ಆ ಭಗವಂತನಿಗಂತರಂಗ ಭಕ್ತರಾದ ಸಾತ್ವಿಕರನೇಕರುಂ ಅಲ್ಲಿ ನಿತ್ಯದೊಳ ತ್ರಿಷವಣಸ್ನಾನವಂ ಮಾಡುತಿರುವರು. ಯಾವತೀರ್ಥದಲ್ಲಿ ಭಗವದ್ಭಕ್ತರು ಸ್ನಾನಮಾಡುವರೋ ? ಅಲ್ಲಿ ಸಮಸ್ತ ಪುಣ್ಯನದಿಗಳುಂ ಸಾನ್ನಿಧ್ಯಮಂ ಮಾಡುವುದು. ನಾನುಂ ಚೈತ್ರಮಾಸದೊಳ ಶ್ರೀರಂಗದಲ್ಲಿರುವ ಚಂದ್ರಪುಷ್ಕರಣಿಯಲ್ಲಿಯುಂ ವೈಶಾಖಮಾಸದೊಳ ಸತ್ಯವ್ರತಕ್ಷೇತ್ರವೆಂಬ ಕಾಂಚಿಯೊಳಿರುವ ಅನಂತ ಸರಸ್ತೀರ್ಥದಲ್ಲಯುಂ, ಆಷಾಢಮಾಸ ಮುಂಟಾಗುತಿರೆ ವರಾಹದಂಷ್ಟ್ರಾಗ್ರ ನಿಖಾತವಾದ ತುಂಗಭದ್ರಾನದಿಯೊಳ್ಗು, ಭಾದ್ರಪದ ಮಾಸದೊಳ ಶ್ರೀವೇಂಕಟಾದ್ರಿಯಲ್ಲಿ ವಿರಾಜಿಸುತಿರುವ ಸ್ವಾಮಿ ಪುಷ್ಕರಣಿಯಲ್ಲಿಯುಂ, ಸಕಲ ಮಾಸಗಳಿಲ್ಲಿಯು ಮುತ್ತಮವಾದ ತುಲಾಮಾಸದಲ್ಲಿ ಅತಿಪುಣ್ಯಕರವಾದ ಕಾವೇರೀ ನದಿಯಲ್ಲಿಯುಂ ಉತ್ತಮೋತ್ತಮವಾದ ಫಲ್ಗುನ ಮಾಸದಲ್ಲ ಆ ಯಾದವಾದ್ರಿಯ ಶೃಂಗದಲ್ಲಿರುವ ಕಲ್ಯಾಣೀ ತೀರ್ಥದಲ್ಲಿಯುಂ, ವಾಸಮಾಡುವೆನು. ಆಫಾಲ್ಗುನದಲ್ಲಿ ಮತ್ತಂ ಸಮಸ್ತ ನದಿಗಳುಂ ಅಲ್ಲಿ ವಾಸಮಾಡುವುದು. ಆಕಾಲದಲ್ಲಿ ಯಾರು ಕಲ್ಯಾಣೀಸ್ನಾನಮಾಡುವರೋ ಅವರು ಸಕಲ ತೀರ್ಥಸ್ನಾನ ಫಲವಂ ಪೊಯ್ವರು. ಆದುದರಿಂದೆಲೈ ಬ್ರಾಹ್ಮಣನೆ ನೀನು ಈಗಳುಂ ಪೋಗಿ ಆಕಲ್ಯಾಣೀ ತೀರ್ಥದೊಳ ಸ್ನಾನವಂಮಾಡಿ ಭಕ್ತಿಪೂರ್ವಕಮಾಗಿ ಅಲ್ಲಿರ್ಪ ಶ್ರೀಮನ್ನಾರಾಯಣನಂ ಸೇವಿಸಿ ಪುನಃ ಇಲ್ಲಿ ಬರುವ ನಾದರೆ ನನ್ನ ಪ್ರಾಕ್ಷರೂಪವಂ ತೋರುವೆನು. ಎಂದು ಹೇಳಲು ಬ್ರಾಹ್ಮಣನು ತನ್ನ ಶಕ್ತಿಯಿಂದ ಬಹಳ ದೈನ್ಯವಂ ಹೊಂದಿದವನಾಗಿ ಅತಿವಿನಯ ಪೂರ್ವಕವಾಗಿ ಆಕನ್ನಿಕೆಯುಂ ಕುರಿತು ಎಲೈ ಮಂಗಳಕರವಾದ ದರ್ಶನವುಳ್ಳ ಕನ್ಯಾಮಣಿಯೇ ನಿನ್ನ ದರ್ಶನದಿಂದಲೇ ನನಗೆ ಸಕಲ ಶುಭೋದಯಂಗಳುಂ ಉಂಟಾದವು ನಿನ್ನ ಮನೋರವ ಚನಗಳಿಂದ ನಾನತ್ಯಂತ ಧನ್ಯನಾದೆನು. ನೀನ್ನಿಂದಲು ಮಿಾಪ್ರಕಾರವಾಗಿ ಪೊಗಳಿಸಿಕೊಳ್ಳ ಮಹಾಮಹಿಮೆಯುಳ್ಳ ಕಲ್ಯಾಣೀಸ್ನಾನವು ನನಗೆಅತ್ಯಂತಪೇಕ್ಷಿತವಾಗಿದ್ದರೂ ಪ್ರಕೃತದಲ್ಲಿ ನಾನು ಬಹುದೂರ ದೇಶವಂ ಅತಿಕ್ರಮಿಸಿ ನಡೆದುಬಂದು ಬಹಳಶ್ರಾಂತನಾಗಿರುವೆನು. ನನ್ನ ಪತ್ನಿಯುಂ ಸ್ವಭಾವದಿಂದುರ್ಬಲೆಯಾಗಿಯುಂ, ನನಗಿಂತಲೂ ಪರಿಶ್ರಾಂತೆಯಾಗಿರುವಳು. ಈ ಬಾಲಕರು ಕೇವಲವಾಶಕ್ತರಾಗಿರುವರು. ಈ ದುರವಸ್ಥೆಯೊಳಿರುವ ನಾನು ಅಷ್ಟು ದೂರದೇಶವೊಳಿರುವ ತೀ

ರ್ಥಕ್ಕೆ ಪುನಃ ಹ್ಯಾಗೆ ಹೋಗಿಬರುವೆನು? ಈ ಶರೀರವು ನೀರಿನೊಳಿರುವ ಗುಳ್ಳೆಯಂತೆ ಅಸ್ಥಿರವಾದುದರಿಂದ ನೀನೇ ಕೃಪೆಗೊಂಡು ನನಗೆ ಕಲ್ಯಾಣೀ ತೀರ್ಥ ಸ್ನಾನಫಲವುಂ ನಿನ್ನ ನಿಜಸ್ವರೂಪವಾದ ಗಂಗಾ ಸ್ನಾನಫಲಮುಂ ಸದ್ಯವೊಳ್ ಕೊಟ್ಟು ಸಂರಕ್ಷಿಸಬೇಕೆಂದು ಪ್ರಾರ್ಥಿಸಿ ಅತ್ಯಂತ ಭಕ್ತಿಯಿಂದಾ ಕನ್ನಿಕೆಗೆ ನಮಸ್ಕರಿಸಿ ಕ್ಷೇಮಮಾಗಿದ್ದು ನಿಂದಿರಲು ಗಂಗೆಯುಂ ಕರುಣೆಯಿಂದ ಸಮೀಪದೊಳಿರುವ ಸಖಿಯಾದ ಯಮುನೆಯ ಮುಖಮಂ ನೋಡಿ ನಸುನಗುತಲಾ ಯಮುನೆಯು ಅಭಿಪ್ರಾಯಮಂ ತಿಳಿದು ತನ್ನ ಪ್ರವಾಹಮಂ ತೋರಿ ಬ್ರಾಹ್ಮಣನಂ ಕುರಿತಿಂತೆಂದಳು. ಎಲೈ ಸುಚರಿತನೇ ನಿನ್ನ ಭಕ್ತಿಗೆ ಮೆಚ್ಚಿ ನನ್ನ ಪ್ರವಾಹರೂಪಮಂ ತೋರಿರುವೆನು. ನೀನು ಇಲ್ಲಿ ಸ್ನಾನಮಾಡುವ ಸಮಯದೊಳ್ ಆ ಕಲ್ಯಾಣಿಯಂ ಸ್ಮರಿಸಿಕೊಂಡು ಕಲ್ಯಾಣಿಯೆಂಬ ನಾಮಧೇಯಮಂ ಮೂರು ಆವರ್ತಿ ಅನುಸಂಧಿಸಿ ಸಕುಟುಂಬನಾಗಿ ಮುಳುಗಿರಲ್ ನಿನ್ನ ಇಷ್ಟಾರ್ಥಂಗಳ್ ಸಿದ್ಧಿಸುವುವೆಂದು ಹೇಳಿ ಅಂತರ್ಧಾನಮನೈದಿದಳು ಅನಂತರದಲ್ಲಿ ಸುಚರಿತನುಂ ಅತಿಸಂತುಷ್ಟನಾಗಿ ಗಂಗಾ ನದಿಯಂ ಕುರಿತು ಪರಮಾಶ್ಚರ್ಯಯುಕ್ತನಾಗಿ ಗಂಗಾವಚನ ವಿಶ್ವಾಸದಿಂ ಪತ್ನೀಪುತ್ರರುಗಳೊಡನೆ ಗಂಗಾ ತೀರ್ಥದೊಳ್ ನಾಭಿಪ್ರಮಾಣ ತೀರ್ಥದೊಳ್ ನಿಂದು ಕಲ್ಯಾಣೀ ತೀರ್ಥಮಂ ಸ್ಮರಿಸಿ ತನ್ನಾಮೋಚ್ಚಾರಣಮಂ ಮಾಡಿ ತದೇಕಧ್ಯಾನ ಪರನಾಗಿ ನೀರೊಳಗೆ ಮುಳುಗಿದ್ದನು ಮುಹೂರ್ತಾರ್ಧಮಾತ್ರದೊಳಗೆ ಆ ಬ್ರಾಹ್ಮಣನು ಸಕುಟುಂಬನಾಗಿ ಗಂಗೆಯ ದಿವ್ಯಶಕ್ತಿಯಿಂದ ಕಲ್ಯಾಣೀತೀರ್ಥ ಮಧ್ಯದಿಂದೆದ್ದು ಸಂಭ್ರಮದಿಂದ ಹತ್ತು ದಿಕ್ಕುಗಳಂ ನೋಡಿ ಬೆರಗಾಗುತ್ತಲಾ ಸರಸ್ತೀರವಂ ಸೇರಿದನು. ಆ ಸಮಯದಲ್ಲಿ ಅಲ್ಲಿದ್ದ ಭೂಸುರೋತ್ತಮರೆಲ್ಲರುಂ ಆಶ್ಚರ್ಯಪಟ್ಟು ಈ ಸುಚರಿತನಂ ಕುರಿತು ಎಲೈ ಬ್ರಾಹ್ಮಣನೇ ನೀನುಯಾರು? ಎಲ್ಲಿ ಇದ್ದವನು ಈ ತೀರ್ಥಮಧ್ಯದಿಂದೆದ್ದು ಬಂದ ವಿಧಾನವೇನು? ನಿನ್ನ ಚರಿತವಂ ನೋಡಿದರೆ ನಮಗೆ ಅತ್ಯಾಶ್ಚರ್ಯಮುಂಟಾಗಿರುವುದು. ಆದುದರಿಂ ಯಥಾರ್ಥವಾಗಿ ನಿನ್ನ ವೃತ್ತಾಂತವಂ ಹೇಳೆಂದು ಬೆಸಗೊಳಲ್ಕೆ ಆ ಬ್ರಾಹ್ಮಣನಿಂತೆಂದನು ಎಲೈ ಮಹಾನುಭಾವರೇ? ಎನಗೆ ನಿಯತವಾದೊಂದು ಆವಾಸವಿಲ್ಲವು, ಬಹುಕಾಲದಿಂ ತೀರ್ಥಯಾತ್ರಾಪರನಾಗಿ ಅನೇಕ ತೀರ್ಥಸ್ನಾನಮಾಡಿಕೊಂಡು ಗಂಗೆಗೈದಿದೆನು ಗಂಗಾಪ್ರವಾಹಮೆನ್ನಕಣ್ಣಿಗೆ ಕಾಣದಿದ್ದುದು ಅನಂತರದಲ್ಲಿ ಕನ್ಯಾರೂಪದಿಂದೆನಗೆ ಕಲ್ಯಾಣತೀರ್ಥವೆಂಬೊಂದು ತೀರ್ಥದಮಹಿಮೆಯಂ ಪೊಗಳಿ ತನ್ನ ರೂಪಮಂ ತೋರಿದಳು. ಆಗ ನಾನುಂ ಈನನ್ನ ಸತಿಯುಂ ಇವರೀರ್ವರ್ ಕುಮಾರಕರುಂ ಕೂಡಿ ಗಂಗೆಯೊಳ್ ಮುಳುಗಿದೆನು ಈಗ ನಾನೆದ್ದು ಬಂದ ಈ ತೀರ್ಥವಾವುದು? ಈ ಕ್ಷೇತ್ರವಾವುದು ಇದರ ಅತಿಶಯವಾವುದು ನಾನಿದ್ದ ಗಂಗಾ ಪ್ರವಾಹ ಇಲ್ಲಿ ಪೋದುದು? ಎಂದು ಕೇಳಲು ಆ ಬ್ರಾಹ್ಮಣರೆಲ್ಲರುಂ

ದೇಹವೇಣಾಗಿ ಕೃಶವಾದುದಂ ನೀವರಿಯಿರಿ ? ನಿಮ್ಮ ಯಾಚಕವೃತ್ತಿಯಿಂದಾದ ದರೆ ಸ್ವಲ್ಪಕಾಲ ಮುನ್ನಿನಂತಿರಲಾರೆವು. ಆದುದರಿಂದಾಪತ್ಕಾಲದೊಳನ್ಯಮಾರ್ಗಂಗಳಾದರೂ ಅಕಾರ್ಯಮನಾದರು ಮಾಡಿಕೊಂಡು ಸತೀಸುತರಂ ಸಲಹುವುದು ಗೃಹಸ್ಥಧರ್ಮವೆಂದು ಹಿರಿಯರಿಂ ಕೇಳಿರುವೆನು. ಸಕಲ ಧರ್ಮಂಗಳಂ ತಿಳಿದಿರುವ ನಿಮ್ಮ ಸನ್ನಿಧಿಯೊಳಜ್ಞಾನಿಯಾದ ನಾನಿನ್ನೇನರುಹುವೆನು. ಸ್ತ್ರೀಜನಕೆ ಸ್ವಾಭಾವಿಕವಾದ ಚಾಪಲತ್ವದಿಂ ವಿಜ್ಞಾಪಿಸಿದೆನಲ್ಲದೆ ನಿಮಗೆ ಕಾರ್ಯಾಕಾರ್ಯಂಗಳಂ ವಿಧಿಸುವುದಕ್ಕಾಗಲಿ ನಿಷೇಧಿಸುವುದಕಂ ನಾಂ ಶಕ್ತಳಾಗುವೆನೆ ? ಎನ್ನ ಮಾತಿನೌದ್ಧತ್ಯಮಂ ಮನ್ನಿಸಿ ಈ ದುರ್ಭಿಕ್ಷದೊಳ್ ನಿಮ್ಮ ಕುಟುಂಬಮಂ ರಕ್ಷಿಸಲು ನಾಂ ಪೇಳ್ವುಪಾಯಮಂ ಲಾಲಿಸಬೇಕು. ದ್ರವಿಡ ದೇಶದೊಳ್ ದಾರಿದ್ರ್ಯ ನಿವಾರಣನೆಂಬ ಅರಸಂ ಮಹೋದಾರನಾಗಿ ಅರ್ಥಿಗಳಿಗೆ ಅರ್ಥಿತಾರ್ಥಮಂ ದ್ವಿಗುಣಮಾಗಿಯುಂ ತ್ರಿಗುಣಮಾಗಿಯುಂ ಕೊಡುವನೆಂದು ಪೇಳ್ವರಲ್ಲದೆ ನೆರೆಹೊರೆ ಮನೆಗಳ ಗೃಹಸ್ಥರೆಲ್ಲರು ಅತ್ತನಿಂದ ಅನೇಕವಾಗಿ ದ್ರವ್ಯಮಂ ಸಂಪಾದಿಸಿ ತಂದು ಸುಖವಾಗಿರುವುದಂ ನಾಂ ನೋಡಿರುವೆನು. ಆದುದರಿಂ ತಾವು ಆ ಧೊರೆಯ ಸಮೀಪಕೆ ಪೋದರೆ ಯಥೇಚ್ಛಮಾದ ದ್ರವ್ಯಮಂ ತಮಗರ್ಪಿಸುವನು. ಈ ವಿಷಯದೊಳ್ ಸಂದೇಹವಿಲ್ಲದೆ ಪೋಗಿಬನ್ನಿರೆಂಬ ಆ ಸುಶೀಲೆಯ ವಚನಮಂ ಕೇಳಿ ಸುಚರಿತನು ಅತಿಪ್ರಾಜ್ಞನಾಗಿದ್ದರುಂ ಆ ಲೋಲಲೋಚನೆಯ ಭ್ರೂವಿಲಾಸಗಳೆಂಬ ಪಾಶದಿಂ ಬದ್ಧನಾಗಿ ಅವಳ ಚತುರ ವಚನಗಳೆಂಬ ಮದಿರೆಯಿಂ ಮೋಹಿತನಾಗಿ ನಾರಾಯಣನ ಚರಣ ಸೇವಾರಸದೊಡನೆ ನಿಜವ್ರತಮಂ ಬಿಟ್ಟು ನರಪತಿಯಿಂ ಧನಾರ್ಜನಮಂ ಮಾಡಿ ಸತಿಯಾ ಸುತರಂ ಪೋಷಿಸಿ ಸಲಹುವೆನೆಂಬ ಆಸೆಯಿಂ ದೀರ್ಘಕರ್ಮ ಮಾರಕೆ ಕೂಡನೆ ಪೊರಮಟ್ಟನು. ಇಂತು ಹತ್ತೆಂಟು ದಿನಗಳ ಪ್ರಯಾಣಮಂ ಮಾಡಿ ದ್ರವಿಡೇಶ್ವರನ ನಗರಮಂ ಪೊಕ್ಕು ಆ ಧೊರೆಯಂ ಕಾಣಲ್ ಸಮಯವಿಲ್ಲದೆ ರಾಜವಲ್ಲಭನ ಉಪಸರ್ಪಣಾರ್ಥವಾಗಿ ರಾಜಧಾನಿಯೊಳ್ ನಿವಾಸದಿಂ ದನೇಕಕ್ಲೇಶಂಗಳನನುಭವಿಸಿ ಬಹು ಪ್ರಯಾಸದಿಂ ರಾಜನಂ ಕಂಡು, ಯಥೋಚಿತವಾಗಿ ದ್ರವ್ಯಮಂ ಸಂಪಾದಿಸಿಕೊಂಡು ಪುತ್ರರುಂ ತಾನುಂ ಮಾರ್ಗದೊಳ್ ಬರುತ್ತಿರಲಾ ಬ್ರಾಹ್ಮಣಂ ರಾಜಸನ್ನಿಧಿಯೊಳ್ ವಿಶೇಷ ಸನ್ಮಾನಮಂ ಪಡೆದು ಅಧಿಕವಾದ ದ್ರವ್ಯಮಂ ಕೊಂಡೊಯ್ವನೆಂದೆಣಿಸಿ ಕೆಲವು ಬಂದಿ ಚೋರರು ಎರಡು ಮೂರು ಪ್ರಯಾಣಗಳೊಳ್ ಅನುಸರಿಸಿ ಬಂದು ಮಾರ್ಗಮಧ್ಯದೊಳಾತನಂ ದೊಣ್ಣೆಗಳಿಂದಲುಂ ಕಲ್ಲುಗಳಿಂದಲುಂ ಬಡಿದು ಎಲ್ಲಾ ದ್ರವ್ಯಂಗಳಂ ದೋಚಿಕೊಂಡೋಡಿದರು. ಆಗಲಾ ಬ್ರಾಹ್ಮಣನು ಬಹಳ ವಿಷಣ್ಣನಾಗಿ ತನ್ನ ಮಕ್ಕಳಂ ನೋಡಿ ಎಲೈ ಮಕ್ಕಳಿರ ! ಸರ್ವರಕ್ಷಕನಾದ ಶ್ರೀಮನ್ನಾರಾಯಣನು ಸಕಲ ಪುರುಷಾರ್ಥಂಗಳಂ ಕೊಡಲು ದೀಕ್ಷಾಬದ್ಧನಾಗಿ ಇದ್ದಾಗ್ಯೂ ಅವನ ಚರಣಾರವಿಂದ ಸಾನ್ನಿಧ್ಯಮಂ ಬಿಟ್ಟು ಅಲ್ಪ ಫಲಪ್ರದನಾದ ಮನುಷ್ಯಮಾತ್ರನಂ ಆಶ್ರಯಿಸುವುದಕಾಗಿ ಬಂದ ನನ್ನ ಗತಿ

ಮಹಾತ್ಮರು ಈ ಲೋಕವಲ್ಲಿ ಯಾರೊಬ್ಬರು ಇಲ್ಲವು. ಇಂತು ದುರ್ಭಾಗ್ಯನೊದನ ನಗೆ ಇದಕ್ಕೆ ತಿಲು ಅಧಿಕನಾದ ಶಿಕ್ಷೆಯ ಸಿಗದ್ದುದು ಸಾಲದೆಂದು ಪೇಳಿ ಪಶ್ಚಾತ್ತಾಪ ಯುಕ್ತನಾಗಿ ಕತ್ತರ ಪೆಟ್ಟುಗಳಿಂದಾ ದವ್ರಣವೇದನೆಯಿಂದೊಡಗೂಡಿ ಅಂತು ಹಸನ ವಿಂಬಳವಿ ಬಾನಾರಿ, ಕಣ್ಣೊಳ್ ನೀರು ಸುರಿಸುತಂ ಅಡಿಯಿಡಲಾರದೆ ಬಿಸಿಲ್ಕೆ ಬೇಗೆಯಿಂ ಸುರಿಗಿ ನೊಕ್ಕಿ ಬೀಳುತಿರ್ಪ ಮಕ್ಕಳಂ ಕರೆದು ಕೊಂಡು ಪಿಲ್ಲ ಪೆಸ್ಲಿಗೆ ಬರುತಿರ್ದ್ದಂ ಇತ್ತಲಾ ಸುಶೀಲೆಯ ಸವಿಸಾಪದೊಳಿದ್ದ ನಾರಾಯಣನೆಂಬ ಬಾಲಕ ನೊಂದುದಿನಂ ಬಹಳವಾದ ಪಸಿವಿನಿಂ ಪೀಡಿತನಾಗಿ ತಾಯಿಯ ಸವಿಸಾಪದೊಳಿಂದಳುತ್ತಂ ಅನ್ನವಂ ಕೊಡೆಂದು ಬಹಳವಾಗಿ ಪೀಡಿಸುತ್ತಿರಲಾ ಮಾತೆಯುಂ ಪ್ರಯತ್ನದಿಂ ಸಂಪಾದಿಸಿರ್ದನ್ನವಂ ಒಂದು ಪಾತ್ರೆಯೊಳಿರಿಸಿ ಇದನುಣ್ಣೆಂದು ಕೈಯೊಳ್ ಡಲಾ ಬಾಲಕನುಂ ಅಮ್ಮಾ ಇದು ಭಗವಂತನಿಗೆ ನಿವೇದಿತವಾಗಿಲ್ಲವಾಗಿ ಅನಿವೇದಿತವಾದನ್ನಮಂ ನಾನೆಂತು ಉಣ್ಬೆನೆಂದು ಪೇಳಲಾ ಮಾತೆಯುಂ ಮನದೊಳಾನ ದಿಸುತ್ತಂ ಎಲೈ ಬಾಲಕನೆ? ನಿನ್ನತಂದೆಯುಂ ದೇಶಾಂತರಕೆ ಪೋಗಿರುವರು. ನೀನೇ ಈ ಅನ್ನಮಂ ನಾರಾಯಣನಿಗೆ ಆರೋಗಿಸಿ ಅನಂತರದಲ್ಲಿ ತತ್ಪ್ರಸಾದಮಂ ಭುಜಿಸೆಂ ದು ಪೇಳಲಾ ಬಾಲಕನುಂ ಕುತೂಹಲಂಬಟ್ಟು ಲೋಕನಾಯಕನಾದ ಶ್ರೀ ನಾರಾಯಣನ ಸನ್ನಿಧಿಗೆ ನಡೆತಂದು ಆ ಪಾತ್ರೆಯಂ ಮುಂದುಗಡೆಯಲ್ಲಿ ಸಮರ್ಪಿಸಿ ದೃಢವಾದಭಕ್ತಿಯಿಂದೆಲೈ ನಾರಾಯಣನೇ ಈ ಅನ್ನಮ ತಾವು ಆರೋಗಿಸಬೇಕೆಂದು ನಿವೇದಿಸಿ ಕೈಮುಗಿದು ಕಣ್ಣಮುಚ್ಚಿ ನಿಂತಿದ್ದನು ಸ್ವಲ್ಪಕಾಲಾ ನಂತರದೊಳು ಉನ್ಮೀಲಿತ ಲೋಚನನಾಗಿ ತಾನು ಸಮರ್ಪಿಸಿದಂತಿರುವ ಅನ್ನಮಂನೋಡಿ ಚಿಂತಾವ್ಯಾಕುಲನಾಗಿ ಎನ್ನ ತಂದೆಯುಂ ಮತ್ತಂ ಹಿರಿಯವರು ಮಾರಾಧನಕ್ರಮವ ನರಿತು ಭಕ್ತಿಯಿಂ ಸಮರ್ಪಿಸಲ್ ಭಗವಂತನು ಭುಜಿಸುವನೆಂದುಂ ನಾನದನೊಂದು ಮರಿಯದಿರುವುದರಿಂ ಭುಜಿಸಲಿಲ್ಲವೆಂದುಂ ಮನದೊಳ್ ಭಾವಿಸಿ ಅರ್ಚಾವತಾರ ಸಮಾಧಿಯಂ ಸಾಕ್ಷಾದ್ವಿಭವ ಮೆಂದೇ ಭಾವಿಸಿ ಎಲೈ ನಾರಾಯಣನೆ ? ಏನುಮರಿಯದ ಬಾಲಕನಾದೆನ್ನೊಳ್ ಕರುಣಿಸಿ ಎನ್ನ ವಿಜ್ಞಾಪನವಂ ಲಾಲಿಸಿ ಈ ಅನ್ನಮಂ ಭುಜಿಸಿ ಎನಗೆ ಕಿಂಚಿತ್ಪ್ರಸಾದವಂ ಕೊಡಬೇಕೆಂದು ಬಿನ್ನವಿಸಿ ಅಡಿಗಡಿಗೆ ನಮಸ್ಕರಿಸುತ ಪಡಿಗಡಿಗೆ ದೂರದೊಳ್ ಮರೆಯಾಗುತಂ ಮತ್ತೆ ಮತ್ತೆ ಸಮಿಪದೊಳ್ನಿಂದು ಆ ವಿಸ್ಫಾಲಿತಾಕ್ಷನಾಗಿ ಬಿನ್ನವಿಸುತಿರುವ ಬಾಲಕನ ಭಕ್ತಿಗೆ ಮೆಚ್ಚಿ ನಾರಾಯಣನುಂ ಶ್ರೀದೇವಿಯುಂ ವಿಭವಾವತಾರವ ನಂಗೀಕರಿಸಿ ಭಕ್ತಿರಸ ಭರಿತಮಾದ ಆ ಪಾತ್ರದೊಳಿರ್ದನ್ನಮಂ ನಿಶ್ಶೇಷವಾಗಿ ಸವಿದು ತೃಪ್ತರಾಗಿರಲಾ ಬಾಲಕನು ಕಣ್ತೆರದು ನೋಡಿ ಆಹಹ ನಾರಾಯಣನು ನಾನುಸಮರ್ಪಿಸಿದನ್ನವನ್ನೆಲ್ಲವಂ ಭುಜಿಸಿದನೆಂದು ಸಂತೋಷಿತನಾಗಿ ತಾಯಿಯ ಸಮಿಪಕೆ ಬಂದು ಅಮ್ಮಾ ಎನಗೆ ಪಸಿವು ಬಹಳ ಮಾದುದು, ಅನ್ನಮಂ ನೀಡೆಂದು ಕೇಳಲಾ ಸುಶೀಲೆಯುಂ ಬಾಲಕನೇ ? ಈಗ ಕೊಟ್ಟಿರ್ದನ್ನವಂ ಏನಾಯಿತು? ಎಂದು

ತ್ತಮಾ ತಾಯಿ ಅತಿಸಂಭ್ರಮದಿಂ ಬಂದು ಭಿಕ್ಷಾಪಾತ್ರವಂ ತೆಗದುಕೊಂಡು ಅದರೊಳ್ತುಂಬಿರುವ ಮೃಷ್ಟಾನ್ನಮಂ ನೋಡಿ ಆಗಲಾಬಾಲಕನ ಹಸಿವಿನಿಂ ಮಾಸವಾಗಿ ಓ ಬಾಲಕನೇ ಬಹಳ ಬಳಲಿದ್ದೈ ಇದನೂಟಮಾಡೆಂದು ಮೊದಲೊಳ್ ಅದೆಲ್ಲವಂ ಬಾಲಕನಿಗೆ ಬಡಿಸಿ ತಾನುಮುಂಡು ಅಂದಿನ ರಾತ್ರಿಯೊಳ್ ಎಲೈಮಗನೇ ಈ ದ್ರವ್ಯಂ ನಿನಗೆಲ್ಲಿ ದೊರಕಿತು ? ನಿನಗಾರು ಕೊಟ್ಟವರು ? ಈ ಸಂಗತಿಯಂ ಯಾರು ಕಂಡಿರುವರು ? ಧಿಟವಾಗಿ ಪೇಳೆಂದು ಅಂದಿನ ವೃತ್ತಾಂತವೆಲ್ಲವಂ ಕೇಳುತ್ತಲಾ ಕಮಲಾಕಟಾಕ್ಷ ಲಬ್ಧವಾದ ರತ್ನರಾಶಿಯೊಳ್ತನ್ನದೆಂಬಭಿಮಾನವಂ ಬೆಳಸಿ ಅದಂ ಚೋರಾದ್ಯುಪದ್ರವಗಳಿಂ ತಾನೇ ರಕ್ಷಿಸುವಳಂತೆ ಭಾವಿಸಿ ರಾತ್ರಿಯೆಲ್ಲಮುಂ ನಿದ್ರೆಗೈಯ್ಯದೆ ನೋಡುತ್ತಿದ್ದಳು ಇತ್ತಲಾ ಭೂಸುರೋತ್ತಮನು ಕಳ್ಳರ ಪೆಟ್ಟುಗಳಿಂದಾದ ವ್ರಣವೇದನೆಗಳಿಂದಲುಂ ಮಕ್ಕಳಿಗಾಹಾರವಿಲ್ಲದೆ ಬಿಸಿಲೊಳ್ ಬಳಲಿಕೆಯಿಂದಲುಂ ಮೆಲ್ಲಮೆಲ್ಲನೆ ಮಾರ್ಗವೆಲ್ಲಮಂ ಕಳೆದು ಬಂದು ಮನೆಯಂ ಸೇರಲಾ ಸುದತಿಯುಂ ಲಜ್ಜಾಕ್ರಾಂತಳಾಗಿ ತನ್ನ ಪತಿಯನುಂ ಮಕ್ಕಳನುಂ ಮಾರ್ಗಶ್ರಮ ಮಡಗುವಂತೆ ಉಪಚರಿಸಿ ನಡೆದ ವೃತ್ತಾಂತಮೆಲ್ಲವಂ ಬಿಡದೆ ವಿಜ್ಞಾಪಿಸಲಾ ಭೂಸುರೋತ್ತಮಂ ಆ ನಾರಾಯಣನೆಂಬ ಬಾಲಕಂ ನಡೆಸಿದ ಚರಿತಮೆಲ್ಲವಂ ಆಲೋಚಿಸಿ ಬಾಲಕನ ಭಕ್ತಿಗೆ ಭಗವಂತನೊಲಿದನೆಂದುಂ ಭಿಕ್ಷೆಯು ನಿತ್ತವಳೇ ಮಹಾಲಕ್ಷ್ಮಿಯೆಂದುಂ ನಿಶ್ಚಯಿಸಿ ಮನದೊಳಿಂತೆಂದಂ ಅಯ್ಯೋ ಎನ್ನಂತೆ ಮೂಢಾತ್ಮ ನೀಲೋಕದೊಳೆಲ್ಲಿಯು ಮಿಲ್ಲವು. ಒಂದಂಜಲಿಮಾತ್ರದಿಂ ಸಕಲ ಪುರುಷಾರ್ಥಗಳಂ ಕೊಡುವ ಲೋಕಮಾತೆಯಾದ ಲಕ್ಷ್ಮೀದೇವಿಯಿಂ ಸೇವಿತನಾಗಿ ಭಕ್ತಿಪೂರ್ವಕವಾಗರ್ಪಿಸುವ ಒಂದು ಪೂಸರದಿಂದಲಾದರುಂ ತುಳಸೀ ಪತ್ರದಿಂದಲಾದರುಂ, ತೀರ್ಥೋದಕದಿಂದಲಾದರುಂ, ಕೊನೆಗೊಂದು ನುತಿವಚನದಿಂದಲಾದರುಂ, ಸಂತೋಷಿಸಿ ತನ್ನ ಸರ್ವಸ್ವಪದಮನೀವ ನಾರಾಯಣನಂಬಿಟ್ಟು ಕುತ್ಸಿತ ನರಪತಿ ಸೇವೆಯುಂ ನಾನೇಕೆ ಮಾಡಿದೆನೆಂದು ಪಶ್ಚಾತ್ತಾಪದಿಂದೊಡಗೂಡಿ ತದನಂತರದೊಳ್ ಪರಮಭಕ್ತಿಯಿಂ ನಾರಾಯಣನಂ ಸೇವಿಸುತ್ತಿರ್ದನು. ಮತ್ತಮಾ ನಾರಾಯಣನೆಂಬ ಪುತ್ರನೊಳತಿ ವಿಶ್ವಾಸವನಿಟ್ಟು ಸಕಲ ವೇದಶಾಸ್ತ್ರಂಗಳಂ ತಾನೇ ಶಿಕ್ಷೆಗೈದು ಲಕ್ಷ್ಮೀಕಟಾಕ್ಷ ಲಬ್ಧಮಾದೈಶ್ವರ್ಯದಿಂ ಸಂತುಷ್ಟನಾಗಿ ಸದಾಚಾರಾನ್ವಿತನಾಗಿ ನಿತ್ಯಮುಂ ಭಗವದಾರಾಧನಂಗಳಂ ಮಾಡಿ ಸಹಸ್ರಗುಣಮಾಗಿ ತದೀಯರ ನಾರಾಧಿಸುತಿರ್ದನು.

ಈಪ್ರಕಾರ ಮಿರಲಾ ಬ್ರಾಹ್ಮಣಂ ಮಹಾಧನಿಕನೆಂದು ಪ್ರಖ್ಯಾತಮಾಗೆ ಕೆಲವುಮಂದಿ ಚೋರರು ಮಾತನ ಧನವನಪಹರಿಸ ಬೇಕೆಂಬಿಚ್ಛೆಯಿಂ ಕಪಟವೇಷಮಂ ಧರಿಸಿ ಆ ನಾರಾಯಣಾದ್ರಿಗೆ ಬಂದು ಪರಮ ಭಾಗವತರಂತೆ ಕಲ್ಯಾಣೀ ತೀರ್ಥದೊಳ್ ಮಿಂದು ಲಲಾಟಸ್ಥಾನಗಳೊಳ್ ಶ್ವೇತಮೃತ್ತಿಕೆಯಿಂ ದ್ವಾದಶೋರ್ಧ್ವ ಪುಂ

ಡ್ರಮಂ ಇಕ್ಕಿ ಅಡಿಗಡಿಗೆ ಭಗವನ್ನಾಮಗಳಂ ನುಚ್ಚರಿಸುತ್ತಂ ವಿಷ್ಣುಭಕ್ತರಂ ಕಂಡಂ
ದು ಅತಿಸಂಭ್ರಮದಿಂ ವಿಶ್ವಾಸಮಂ ನಟಿಸಿ ದಂಡನಿಕ್ಕುತ್ತಲುಂ ಬರುತಿರಲ್ ಸುಚರಿ
ತನು ಅವರಂ ಕಂಡು ಇಂದು ಸುದಿನವಾದುದು ಮಹಾನುಭಾವರಾದ ವಿಷ್ಣುಭಕ್ತರತಿ
ಥಿಗಳಾಗಿ ದೊರಕಿರುವರು. ಇವರನಾರಾಧಿಸಿದೊಡೆ ಭಗವಂತನಿಗತ್ಯಂತ ಮುಖೋ
ಲ್ಲಾಸವಾಗುವದು ಅದರಿಂ ನಾನು ಕೃತಾರ್ಥನಾಗುವೆನೆಂದು ನೆನೆದು ಅವರ ಸಮೀ
ಪವನೆಯ್ದಿ ಓ ಮಹಾನುಭಾವರೇ ? ನೀವೆನ್ನ ಗೃಹಮಂ ತುಳಿದು ನಿಮ್ಮ ಪಾದಧೂಳಿ
ಯಿಂದದಂ ಪರಿಶುದ್ಧವಾಗಿ ಮಾಡಿ ನಾನರ್ಪಿಸುವ ಸತ್ಕಾರವನಂಗೀಕರಿಸಿ ಎನ್ನನುಂ
ಕೃತಾರ್ಥನಾಗಿ ಮಾಡಬೇಕೆಂದು ಪ್ರಾರ್ಥಿಸಲಾ ಕಪಟ ಬ್ರಾಹ್ಮಣರುಂ ಮನದೊ
ಳು ನಾಚುತ್ತಲುಂ ಲೋಭಮೋಹಾಕ್ರಾಂತರಾಗಿ ಅವನ ಗೃಹಮಂ ಪೊಕ್ಕು ಆತನ
ಗೃಹದೊಳ್ ಭಗವತ್ಪಾದ ತೀರ್ಥಮಂ ಸ್ವೀಕರಿಸಿ ಭಗವನ್ನಿವೇದಿತವಾದ ಪ್ರಸಾದಮಂ
ಭುಜಿಸಲಾಗಿ ತತ್ಕ್ಷಣದೊಳಾ ಚೋರರಿಗೆ ಕಪಟಬುದ್ಧಿಯಿಂದ ಲಾದರುಂ ಕಲ್ಯಾ
ಣೀಸ್ನಾನದಿಂದಲುಂ, ಭಗವನ್ನಾಮೋಚ್ಚಾರಣದಿಂದಲುಂ, ಭಾಗವತರಿಗೆ ನಮಸ್ಕ
ರಿಸಿದ್ದರಿಂದಲುಂ, ಮತ್ತಂ ಪರಮಭಾಗವತನಾದ ಸುಚರಿತನ ಗೃಹದೊಳ್ ವಿಷ್ಣು
ಪಾದ ತೀರ್ಥಮಂ ಸ್ವೀಕರಿಸಿ ಭಗವತ್ಪ್ರಸಾದಮಂ ಭುಜಿಸಿದ ಸುಕೃತದಿಂದಲುಂ,
ಪಾಪಬುದ್ಧಿ ತೊಲಗಿ ಸತ್ವಮುದಿಸಿ ಭಯಭಕ್ತಿ ನಿರ್ವೇದಗಳಿಂ ಸುಚರಿತನಂ ನೋ
ಡುತಿಂತೆಂದರ್ ಸ್ವಾಮಿ ನಾವೆಲ್ಲರುಂ ಚೋರರು ನಿಮ್ಮ ದ್ರವ್ಯಾಪಹಾರಾರ್ಥವಾಗಿ
ಈ ಕಪಟ ವೇಷಮಂತಾಳ್ದು ಬಂದೆವು ಋಜುಸ್ವಭಾವ ಮುಳ್ಳತಾವುಂ ವೇಷಮಾತ್ರ
ದಿಂದೆಮ್ಮಂ ಸಾಧುಗಳೆಂದೆಣಿಸಿ ವಿಶ್ವಾಸದಿಂದಾರಾಧಿಸಿದಿರಿ ಎಂದು ಪೇಳಲಾ ಸುಚರಿತ
ನಿಂತೆಂದನು. ನೀವು ಚೋರರಾದರುಂ ನನ್ನ ಧನವಾದ ನಾರಾಯಣ ಚರಣಾರವಿಂ
ದಮಂ ಅಪಹರಿಸಲಪ್ಪುದೆ ? ಎನಲು ಅವರೆಲ್ಲರುಂ ಹರ್ಷೋದ್ರೇಕದಿಂ ಪುಳಕಾಂಚಿತ
ಗಾತ್ರರಾಗಿ ಅವರ ಪಾದದೊಳ್ಮಣಿದು ಕೈಮುಗಿದು ತಲೆವಾಗಿನಿಂದು ಎಲೈ ವೈಕುಂಠ
ಪ್ರಿಯನೇ ? ನಾವು ಈ ಪಾಪಮೆಂಬ ಅಕೂಪಾರದಿಂದೆದ್ದು ಹರಿಪದಾರವಿಂದಮಂ ಸೇ
ರುವುದಕುಪಾಯಮಂ ಉಪದೇಶಿಸಬೇಕೆಂದು ಬೇಡುತಿರಲು — ಆ ಸುಚರಿತನುಂ,
ದಯೆಗೂಡಿ ಅವರಿಗೆ ದ್ವಯಮೆಂಬ ಮಂತ್ರರತ್ನಮಮುಪದೇಶಿಸಿದರು. ಅವರೆಲ್ಲ
ರು ತತ್ಕ್ಷಣದೊಳಾಮಂತ್ರಮಂ ಅನುಸಂಧಾನವಂ ಮಾಡಿ ತಿರುನಾರಾಯಣ ಸ್ವಾಮಿ
ಯವರ ಚರಣಾರವಿಂದದೊಳ್ ಶರಣಾಗತಿಯಂ ಮಾಡಿ ಕೈವಲ್ಯಪದವಿಗೆ ಪೋದರು.
ಈ ಪ್ರಕಾರವಾಗಿ ಸುಚರಿತನುಂ ಪುತ್ರಪೌತ್ರಾದಿಗಳೊಡನೆ ಆ ಯಾದವಾದ್ರಿಯೊಳ್
ಬಹುಕಾಲವಿದ್ದು ಯಥೇಚ್ಛೆಯಿಂ ಭಗವದ್ಭಾಗವತ ಕೈಂಕರ್ಯಗಳಂ ಮಾಡಿ ಕೊನೆಗೆ
ನಿತ್ಯಸೂರಿ ಭೋಗ್ಯವಾದ ಪರಮ ಪದದೊಳ್ ನಿತ್ಯಕೈಂಕರ್ಯದೊಳಿರ್ದ್ದನ್ — ಈ ಸು
ಚರಿತೋಪಾಖ್ಯಾನಮಂ ಭಕ್ತಿಪೂರ್ವಕಮಾಗಿ ಕೇಳುವವರ್ಗಂ, ಪೇಳುವವರ್ಗಂ,
ಭಗವತ್ಕಟಾಕ್ಷಮುಂಟಾಗಿ ನಾರಾಯಣನಿಗೆ ಸದೃಶನಾದ ಪುತ್ರಸಂತಾನಮುಂ ಧನ

ಧಾನ್ಯ ಸಮೃದ್ಧಿಯುಂ, ಅನ್ನದಾನ ಪರೋಪಕಾರಾದಿಧರ್ಮಾಭಿವೃದ್ಧಿಯುಂ, ಉಂಟಾಗುವುದು. ಮತ್ತಂ ಅವರ ಮನೆಯೊಳ್ ಭುಜಿಸುವವರಿಗಂ ಪಾತಕಂಗಳಡಗಿ ಸದ್ಗತಿಯುಂಟಾಗುವದೆಂದು ನಾರದರ ವಾಕ್ಯಮಂ ಕೇಳಿ ಋಷಿಗಳೆಲ್ಲರುಂ ಆನಂದಿಸುತಿರ್ದರು.

ಶ್ರೀಃ

## ಆರನೆಯ ಅಧ್ಯಾಯವು.

ವೃ॥ ವನಜಸಂಭವನೆನಕುಲೇಶಗೆ ವಿನಯದಿಂಕೊಡಲತ್ತಣೆರಿ|ಜನ
ಕತನಯಾತನಯನಂದನೆ ಕನಕಮಾಲಿನಿಯರ್ಥಿಯಿಂ॥ ವಿನುತೆಯು
ದುಕುಲ ವನಧಿಗೆಶ್ರೀ ದನುಜವೈರಿಜುಮರ್ಚಿಸಲ್ | ವನಜನಾ
ಭನು ಭುವನಭೂಷಣ ಯದುಮಹೀಧರಕೈದಿದಂ॥

ಅನಂತರದಲ್ಲಿ ಋಷಿಗಳೆಲ್ಲರುಂ ಸಂತೋಷಯುಕ್ತರಾಗಿ, ಎಲೈ ನಾರದರೇ! ತಮ್ಮಿಂದಹೇಳಲ್ಪಟ್ಟಸುಚರಿತ್ರದ ಕಥೆಯು ಕಿವಿಗಳಿಗಮೃತಧಾರೆಯಂತೆ ಸುಖಕರವಾಯಿತು. ಭಗವತ್ಕಥೆಯಂ ಹೇಳುವದರಲ್ಲಿ ತಮಗಿಂತಲೂ ಸಮರ್ಥರು ಯಾವಲೋಕದಲ್ಲಿಯೂ ಇರುವದಿಲ್ಲ, ಇದೇರೀತಿಯಾಗಿ ಇನ್ನುಂ ವಿಶೇಷವಾದ ಕಥೆಗಳಂ ಹೇಳಬೇಕೆಂದು ಕೇಳಲಾನಾರದರು ಎಲೈಋಷಿಗಳಿರಾ! ನಿಮಗೆ ಯಾವಕಥೆಯಂ ಕೇಳಲಭಿಲಾಷೆಇರುವುದೋ ಅದಂ ಕೇಳಿದರೆ ವಿಸ್ತರಿಸಿಹೇಳುವೆನೆನಲು, ಆ ಋಷಿಗಳಿಂ ಚೋದಿತರಾದ ವೇದವ್ಯಾಸ ಮುನಿ ಯಿಂತೆಂದರು. ಎಲೈ ನಾರದರೇ ಪೂರ್ವದಲ್ಲಿ ಶ್ರೀಮನ್ನಾರಾಯಣನು ಸತ್ಯಲೋಕದಿಂ ಸನತ್ಕುಮಾರನೊಡನೆ ಭೂಲೋಕಕೆ ಬಿಜಯಮಾಡುವ ಸಮಯದೊಳ್ ತಮ್ಮ ಹೃದಯೋದ್ಭವವಾದೊಂದು ಮೂರ್ತಿಯಂ ಬ್ರಹ್ಮನಿಗೆ ಕೊಟ್ಟರೆಂದು ಹೇಳಿದಿರಿ ಆ ರೂಪವೀಗಲುಂ ಬ್ರಹ್ಮಲೋಕ ದೊಳಿರುವುದೆ ಅಲ್ಲದಿರ್ದೊಡೆ ಭೂಲೋಕದೊಳಿರುವುದೆ ಇದನರುಹಬೇಕೆಂದು ಬೆಸಗೊಳಲ್ ನಾರದನಿಂತೆಂದಂ— ಕೇಳಿರೈಋಷಿಗಳಿರಾ ನೀವುಮಾಡಿದಪ್ರಶ್ನೆಯಿಂದ ಒಂದು ದಿವ್ಯಕಥೆಯುಂ ಸ್ಮರಣವಿಷಯಮಾದುದು. ನಿಖಿಲ ಲೋಕ ಲೋಚನಾ ಸೇಚನಕವಾದ ಆ ದಿವ್ಯಮೂರ್ತಿಯ ಚರಿತಮಂ ವಿಸ್ತರಿಸುವುದರಿಂದ ನನ್ನವಾಗಿಂದ್ರಿಯಮುಂ ಕೃತಾರ್ಥವಾಗುವುದು ಇದಂಸಾವಧಾನವಾಗಿ ಕೇಳ್ವುದುಪೂರ್ವಕಾಲದೊಳಿಕ್ಷ್ವಾಕು ಕುಲಾಧ್ಯಕ್ಷನಾದ ಶ್ರೀರಾಮನುಂ ಸೀತಾ ವಿವಾಹಾನಂತರದಲ್ಲಿ ಅಯೋಧ್ಯಾನಗರದೊಳ್ಕೆಲವು ಕಾಲಂ ತಮಗೆ ಕುಲಕ್ರ

ಮದಿಂ ಗೃಹಾರಾಧನಮಾದ ಶ್ರೀರಂಗ ದಿವ್ಯವಿಮಾನಮಂ ಆರಾಧಿಸುತಿರ್ದು ಪಿತೃವಚ
ನ ಪರಿಪಾಲನ ವ್ಯಾಜದಿಂದ ಅರಣ್ಯವನ್ನೈದಿ ದಕ್ಷಿಣ ದೇಶದೊಳ್ ಪುಣ್ಯಾಶ್ರಮವಾದ
ನಾರಾಯಣಾದ್ರಿಯಲ್ಲಿಯುಂ ಕೆಲವು ದಿವಸಮಿರ್ದರು ಆ ಸಮಯದೊಳ್ ಕಂದಮೂ
ಲಾದ್ಯಾಹರಣಾರ್ಥವಾಗಿ ಆ ಪರ್ವತದೊಳೆಲ್ಲಿಯುಂ ಸಂಚರಿಸುತಿರ್ದ ಲಕ್ಷ್ಮಣ
ನೊಂದುದಿನದುದಯಾ ನಂತರದೊಳ್ ಆ ಪರ್ವತದ ತಪ್ಪಲಿನಲ್ಲಿ ವಿಶಾಲವಾದ ಶಿಲಾ
ತಲದೊಳ್ ಸೀತೆಯೊಡಗೂಡಿ ವಿಲಾಸದಿಂ ಕುಳಿತಿರುವ ರಾಮನೊಡನೆ ಇಂತೆಂದನು.
ಸ್ವಾಮಿ! ಅಗ್ರಜವರ್ಯರೇ ? ಈ ಪರ್ವತಾಗ್ರದಲ್ಲಿ ಮಾನಸ ಸರಸ್ಸಿನಂತೆ ನಿರ್ಮಲವಾ
ಗಿಯುಂ ಶೀತಳವಾಗಿಯುಂ ಮಧುರವಾಗಿರುವ ಒಂದು ಸರೋವರವಿರುವುದು ಅದ
ರ ತೀರದಲ್ಲಿ ಅತಿರಮಣೀಯವಾದೊಂದು ವಿಮಾನವಿರುವದು ಆ ವಿಮಾನ ಮಧ್ಯದಲ್ಲಿ
ಅತಿಸುಂದರವಾದೊಂದು ವಿಷ್ಣುಮೂರ್ತಿಯು ದರ್ಶನೀಯವಾಗಿರುವುದು. ಅದ
ರ ಸೌಂದರ್ಯ ಮೆಂದರೆ ನೀವೆಂತು ರೂಪೌದಾರ್ಯ ಗುಣಂಗಳಿಂ ಪುರುಷರ್ಗುಂ ವ್ಯಾ
ಮೋಹಕರಾಗಿಯುಂ ಪ್ರಸಾದ ಸುಮುಖರಾಗಿಯು ಮಿರುವಿರೊ ಅಪ್ರಕಾರವೆ ಇ
ರುವಂತೆ ಎನಗೆ ತೋರಿರುವುದು ನಿಮಗೆ ಅದಂ ನೋಡಲು ಚಿತ್ತವೊಪ್ಪಿದರೆ ದಯಗೆ
ಯ್ಯುವುದೆಂದು ವಿಜ್ಞಾಪಿಸಲು ಶ್ರೀರಾಮನು ಮತಿ ಕುತೂಹಲಾ ಕ್ರಾಂತ ಚಿತ್ತನಾ
ಗಿ ಸೀತಾಸಮೇತನಾಗಿ ಕಲ್ಯಾಣ ಸರಸ್ತೀರಮನೆಯ್ದಿ ಅಲ್ಲಿಪ್ಪ ದಿವ್ಯವಿಮಾನವಂ ಪ್ರ
ದಕ್ಷಿಣಂಗೈದು ಅದರಮಧ್ಯದೊಳ್ ಸಕಲ ಜಗದಾನಂದಕರವಾಗಿಯುಂ ಅಮೃತಧಾರೆ
ಯಂತೆ ಹೃದಯಾಪ್ಯಾಯನವಾದ ಕರುಣಾರಸಪೂರ ಪೂರಿತವಾದ ಕರ್ಣಾಂತ ವಿ
ಶ್ರಾಂತ ವಿಶಾಲ ಲೋಚನ ಯುಗಳದಿಂದಲುಂ ಮಹಾಯೋಗಿಗಳ ಹೃದಯಂಗಳಿಗುಂ
ವೇದಂಗಳಿಗು ಮಗೋಚರನಾದ ನಾನಿಲ್ಲಿ ಪ್ರಾಕೃತರ ಕಣ್ಗಳಿಗುಂ ಗೋಚರನಾ
ಗಿ ಬಂದು ನಿಂದೆನೆಂಬ ಭಾವಮಂ ತೋರ್ಪಡಿಸುವ ಮಂದಹಾಸದಿಂದಲುಂ ನನ್ನ
ಕರಾಗ್ರದೊಳಿರುವ ಈ ಶಂಖಚಕ್ರಲಾಂಛನವ ಭುಜಾಗ್ರದೊಳ್ ತಳೆದು ಗದೆಯಿಂ ನಿ
ರ್ದೇಶಿಸಿ ತೋರಿಸಿದ ಈ ಲಕ್ಷ್ಮೀನಿಲಯವಾದ ಪಾದವನಾಶ್ರಯಿಸಿದರೆ ನಿಮಗಾವು
ದೊಂದು ಭಯಮಿಲ್ಲವೆಂದು ಚೇತನರಿಗೆ ನಿಜಭಾವವಂ ಸಂಜ್ಞೆ ಮಾಡುವಂತಿರುವ
ಚತುರ್ಭುಜಂಗಳಿಂದಲುಂ, ಕಿರೀಟ ಮಕುಟ ಮಕರ ಕುಂಡಲ ಹಾರಕೇಯೂರ ಕಟಕ
ಕಾಂಚೀನೂಪುರಾದಿ ದಿವ್ಯಾಭರಣಂಗಳಿಂದಲೂ ಶೋಭಿತವಾಗಿ ಸಕಲಲೋಕ ಸೌ
ಭಾಗ್ಯದ ಖನಿಯೆಂಬಂತೆಯುಂ ಸೌಂದರ್ಯನಿಧಿಯೆಂಬಂತೆಯುಂ ಲಾವಣ್ಯ ಕಾವಾಸಗೃ
ಹಮೆಂಬಂತೆ ಸೌಕುಮಾರ್ಯದ ಜನ್ಮಭೂಮಿಯೆಂಬಂತೆಯುಂ ಸಮಸ್ತಮಂಗಳಂಗಳಿಗೆ
ಮಂಗಳಾವಹವಾದ ನಾರಾಯಣನ ದಿವ್ಯಮೂರ್ತಿಯಂ ನೋಡಿ ಅದ್ಭುತರಸದಿಂ ಸ್ತಬ್ಧ
ನಾಗಿನಿಂತು ತದೇಕಧ್ಯಾನದೊಳಿರ್ದಂ. ಆ ಕಾಲದಲ್ಲಿ ವೈದೇಹಿಯುಂ ಆ ಭಗವಂತನ
ಅಂಗಾಂಗಂಗಳೊಳ್ ತನ್ನ ವಲ್ಲಭನಂಗಗಳ ಹೋಲಿಕೆಯಂ ನೋಡಿ ಆಶ್ಚರ್ಯಪ್ರಮುದ

ನಗಳಿಂ ಕಣ್ಣೆವೆಯಿಕ್ಕದೆ ಆ ದಿವ್ಯಮೂರ್ತಿಯಂ ನೋಡುತಿರ್ದರ್ಪು. ಅನಂತರದಲ್ಲಿ ಸ ನ್ನಿಹಿತನಾಗಿರುವ ಲಕ್ಷ್ಮಣನಿಂ ತರಲ್ಪಟ್ಟ ಕಮಲ ಕಲ್ಹಾರಾದಿ ಕುಸುಮಗಳಿಂದಲುಂ ದಿವ್ಯೋಪಹಾರಂಗಳಿಂದಲುಂ ಕಮಲನಯನನಾದ ನಾರಾಯಣನಂ ಪೂಜಿಸಿ ಅವನ ಸೌಂ ದರ್ಯಾದಿ ಗುಣಗಳಿಂದಾಕೃಷ್ಟ ಹೃದಯನಾಗಿ ದಿನದಿನದೊಳ್ ಪ್ರವರ್ಧಮಾನವಾದ ನವ ನವಭಕ್ತಿ ವಿಶೇಷಂಗಳಿಂ ವಿವಿಧೋಪಚಾರ ಗಳಿಂದಾರಾಧಿಸುತಂ ತಾನವತರಿಸುವ ಮುಂವೆ ದೇವತೆಗಳಿಗಿತ್ತ ಅಭಯಮಂ ಚಿತ್ರಕೂಟದೊಳ್ ಭರತನಿಗಿತ್ತ ವಾಗ್ದಾನವಂ ದಂಡಕಾರಣ್ಯವಾಸಿಗಳಾದ ಋಷಿಗಳಿಗಿತ್ತ ಅಭಯದಾನವಂ ಮರೆತು ಕೆಲವು ವಾಸಂಗ ಳಪ್ಪಿಯೇ ಕಳೆಯುತಿರಲ್ ಶ್ರೀ ನಾರಾಯಣನುಂ ಪ್ರಸಾದಸುಮುಖನಾಗಿ ಎಲೈ ರಘುಕುಲ ತಿಲಕನೇ ನಿನ್ನವತಾರ ಕಾರ್ಯಂಗಳಂ ನಿರ್ವಹಿಸದೆ ಇಲ್ಲಿ ಕಾಲಮಂ ಕಳೆವುತಿರುವ ಕಾರ್ಯ ವೇನು ರಾಕ್ಷಸಕುಲವಧಮಂ ಮಾಡಿ ಸಾಕೇತನಗರದೊಳ್ ಪಟ್ಟಾಭಿಷಿಕ್ತನಾಗಿ ರಾಜ್ಯಪ ರಿಪಾಲನಂಗೆಯ್ವಾಗಳ್ ನಾನೊಂದಂಶದಿಂದಲ್ಲಿ ಬರುವೆಂ ಆವಾಗಳ್ ಯಥೇಚ್ಛಮಾರಾ ಧಿಸಬಹುದೆಂದು ಪೇಳಿದ ವಾಕ್ಯಮಂ ಕೇಳಿ ಸಂತೋಷಯುಕ್ತನಾಗಿ ಅಲ್ಲಿಂದಂ ಪೊರ ಮಟ್ಟು ಲೋಕಸಂರಕ್ಷಣಾರ್ಥವಾಗಿಯುಂ ಖರದೂಷಣ ತ್ರಿಶಿರಾದಿಗಳನುಂ ಮ ತ್ತಂ ರಾವಣ ಕುಂಭಕರ್ಣಾತಿಕಾಯ ನರಾಂತಕ ದೇವಾಂತಕ ಪುರಂದರಜಿನ್ಮಕರಾಕ್ಷ ದಶ ಕಂಧರಾದಿ ರಾಕ್ಷಸರಂ ಕೊಂದು ಸೀತಾಸಮೇತನಾಗಿಯುಂ ವಾನರ ರಾಕ್ಷ ಸಾಧ್ಯಕ್ಷಾದಿ ಸಕಲ ಪರಿವಾರ ಸಹಿತನಾಗಿಯುಂ ಅಯೋಧ್ಯಾನಗರಮನೈದಿ ರಾಜ್ಯಾ ಭಿಷೇಕ ಮಹೋತ್ಸವಮಂ ಕೈಗೊಂಡು ಸಕಲ ಲೋಕಮಂ ಸಂತೈಸಿದನು. ಆ ಸ ಮಯ ವಿಶೇಷದೊಳ್ ಪ್ರಿಯಭಕ್ತನಾದ ವಿಭೀಷಣಂಗೆ ತನ್ನ ವಿರಹಮಂ ಸಹಿಸ ಲಾರದಿರ್ಪುದಂ ನೋಡಿ ತಮಗೆ ಪ್ರತಿನಿಧಿಯಾಗಿ ಕುಲಧನವಾದ ಶ್ರೀರಂಗನಾಥನಂ ಬಿಜಯಮಾಡಿಸಿ ಕೊಟ್ಟು ಲಂಕಾರಾಜ್ಯಕ್ಕೆ ಕಳುಹಿಸಿದಂ. ಅತ್ತಲಾ ವಿಭೀಷಣನುಂ ತೆರ ಳಲು ಭಗವದ್ವಿರಹದಿಂದಲುಂ ಶ್ರೀರಾಮಂ ಮುಹೂರ್ತಮಾತ್ರಂ ಖಿನ್ನನಾಗಿರುವುದನ ರಿತು ಪದ್ಮಸಂಭವಂ ಸತ್ಯಲೋಕದಿಂದೈತಂದು ಅಂತರಿಕ್ಷಗತನಾಗಿ ಶ್ರೀರಾಮನೊಡ ನಿಂತೆಂದಂ—ಎಲೈ ಮನುಕುಲತಿಲಕನೇ ನೀನರಣ್ಯವಾಸದೊಳಿರುವಾಗ ನಾರಾಯ ಣಾದ್ರಿಯೊಳಗಾರಾಧಿಸಿದ ಭಗವಂತನ ಹೃದಯದಿಂದುದ್ಭವಿಸಿದ ಈ ದಿವ್ಯಮೂರ್ತಿ ಯಂ ಆ ನಾರಾಯಣನ ಆಜ್ಞಾನುಸಾರವಾಗಿ ನಿನಗೆ ಸಮರ್ಪಿಸುವೆನು ನಿನ್ನ ಮನ ದಾಯಾಸಮಂ ಬಿಟ್ಟ ನನ್ನಿಂದಾರಾಧಿಸಲ್ಪಟ್ಟ ಈ ಮೂರ್ತಿಯಂ ಆರಾಧಿಸೆಂದು ಪೇ ಳಲು ಶ್ರೀರಾಮನು ಮತ್ಯಾನಂದ ಭರಿತನಾಗಿ ಬೇಗಮೆದ್ದು ಆ ದಿವ್ಯಮಂಗಲ ವಿಗ್ರ ಹಮಂ ಪರಿಗ್ರಹಿಸಿ ಪರಮಭಕ್ತಿಯಿಂದಾರಾಧಿಸುತಿರ್ದಂ. ಈ ಪ್ರಕಾರಮೊಂ ದು ದಿನಮಾರಾಧನ ಕಾಲದೊಳ್ ಶ್ರೀರಾಮಂ ಸಮೀಪವರ್ತಿಯಾದ ಲಕ್ಷ್ಮಣನಂ ನೋಡಿ ಎಲೈ ತಮ್ಮನೇ ನೋಡು ನಾವು ಅರಣ್ಯವಾಸದೊಳಿರುವಾಗ ನಾರಾಯಣಾ

ದ್ರಿಯಲ್ಲಿ ನಾವಾರಾಧಿಸಿದ ಮೂರ್ತಿಯುಂ ಈ ಬ್ರಹ್ಮಲೋಕದಿಂ ಬಂದ ಮೂರ್ತಿ
ಯುಂ ಸೌಂದರ್ಯಾದ್ಯವಯವ ಸಂಸ್ಥಾನಂಗಳೊಳೊಂದೇ ವಿಧವಾಗಿ ತೋರುವುದೆನಲು
ತತ್ಕಾಲದೊಳ್ ಸವಿನಯವರ್ತಿಯಾದ ಆಂಜನೇಯನಿದಂ ಕೇಳಿ ಕುತೂಹಲದಿಂ ಲಕ್ಷ್ಮ
ಣನ ಕಿವಿಯು ಸವಿನಯಮನೆಯ್ದಿ ಆಪರ್ವತವು ಯಾವುದೆಂದು ಕೇಳಲಾಗಿ ದಕ್ಷಿಣದೇಶ
ದೊಳೆಂದು ಲಕ್ಷ್ಮಣನೆಂದಂ ತತ್ಕ್ಷಣದೊಳಾ ಮಾರುತಪುತ್ರನುಂ ಮಾರುತವೇಗದಿಂ
ದಕ್ಷಿಣ ಬದರಿಕಾಶ್ರಮಕ್ಕೆ ಪೋಗಿ ಅಲ್ಲಿರ್ಪ ಶ್ರೀನಾರಾಯಣನಂ ಸೇವಿಸಿಕೊಂಡು ಬಂ
ದು ಶ್ರೀರಾಮನೊಡನೆ ಇಂತೆಂದಂ ಎಲೈ ಸೀತಾವಲ್ಲಭನೆ ಈ ಮುಹೂರ್ತದಲ್ಲಿ ನಾಂ
ಪೋಗಿ ನೋಡಿ ಬಂದೆನು ಆ ದಿವ್ಯರೂಪಮುಂ ಈ ದಿವ್ಯರೂಪಮುಂ ನಿಮ್ಮ ರೂಪಮುಂ
ಒಂದೇವಿಧವೆಂದು ನನ್ನ ಮನಂ ಅರಿದುದು ಎನಲು ಶ್ರೀರಾಮನುಂ ಅತಿಪ್ರೀತಿಯಿಂ
ದಾತನ ಸ್ವಾಮಿಭಕ್ತಿಯುಂ ವೇಗಾತಿಶಯಮುಮಂ ಶ್ಲಾಘಿಸಿ ಎಲೈ ಅಂಜನಾನಂದನನೇ ಎ
ನ್ನೊಳ್ ಎಷ್ಟುಭಕ್ತಿಯಿಂ ಸೇವಿಸುವೆಯೋ ಆಪ್ರಕಾರದೊಳಾ ನಾರಾಯಣನಲ್ಲಿಯುಂ
ಭಕ್ತಿಯೊಡನೆ ಸೇವಿಸುತ್ತಿರೆಂದು ಅನುಗ್ರಹಿಸಿದರು ಅಂದು ಮೊದಲುಗೊಂಡು ವಾಯು
ಪುತ್ರನಾದ ಹನುಮಂತನುಂ ರಾಮಶಾಸನದಿಂದಾ ಯಾದವಾದ್ರಿಯ ನಾಲ್ಕುಕಡೆಯೊ
ಳಿರ್ದು ಸೇವೆಗೆಯ್ಯುತ್ತಿರುವಂ ಈ ಪ್ರಕಾರವಾಗಿ ಶ್ರೀರಾಮನುಂ ದಿನದಿನದೊಳಭಿ
ವೃದ್ಧಿಯನ್ನೈದುವ ಭಕ್ತಿರಸದಿಂ ಉಭಯ ಪಾರ್ಶ್ವದೊಳ್ ಕಲ್ಪಲತೆಯಿಂದಾಶ್ಲಿಷ್ಟ
ವಾದ ಪಾರಿಜಾತದಂತೆ ಲಕ್ಷ್ಮೀ ಕ್ಷಮಾದೇವಿಯರಿಂ ದೊಡಗೂಡಿ ಸಂಸಾರಕಾಂತಾರ
ಸಂಚಾರ ಖಿನ್ನರಾದ ಚೇತನರಿಗೆ ನಿಜಪಾದಛಾಯೆಯಿಂ ಸಂತಾಪ ಶಮನಮಂ ಮಾಡಿ
ಅಭೀಪ್ಸಿತಫಲಮಂ ಕೊಡುವ ಸುಕುಮಾರ ಸುಂದರಮೂರ್ತಿಯುಂ ವಿವಿಧೋಪಚಾ
ರಗಳಿಂದ ಅನೇಕ ವರ್ಷದವರೆಗು ಆರಾಧಿಸುತ್ತಿರ್ದು ಸಕಲ ಚರಾಚರಂಗಳ್ಗಂ
ಸರಯೂಮಾರ್ಗವಾಗಿ ಮೋಕ್ಷಮನೆಯ್ದಿಸುವ ತಮ್ಮವತಾರ ಪೂರ್ತಿಕಾಲದೊಳ್
ಪ್ರಿಯಭಕ್ತನಾದ ಹನುಮಂತನವಶದೊಳ್ ದಿವ್ಯಮೂರ್ತಿಯುಂ ಕೊಡಲಾ ಪವನತನ
ಯನುಂ ರಾಮಭಕ್ತಿಯಿಂದ ರಾಮಪುತ್ರನಾದ ಕುಶಮಹಾರಾಯಂಗೆ ಸಮರ್ಪಿಸಿದಂ
ಅನಂತರದೊಳ್ ಕುಶಮಹಾರಾಜನುಂ ಸಂತೋಷಿತನಾಗಿ ಇದೇತನಗೆ ಪಿತೃಧನವೆಂ
ದೆಣಿಸಿ ರಾಮಪ್ರಿಯನಂ ಪ್ರೀತಿಯಿಂದಾರಾಧಿಸುತ್ತಿರಲು ಆ ಭಗವಂತನ ಕಟಾಕ್ಷದಿಂದ
ಆ ಕುಶಮಹಾರಾಯಂಗೆ ಸಕಲಲಕ್ಷಣ ಸಂಪನ್ನೆಯಾಗಿಯುಂ ಅಗಣಿತವನಿತಾ ಗುಣ
ಗಣ ವಿಭೂಷಿತೆಯಾಗಿಯುಂ ಇರುವ ಒಂದು ಕನ್ನಿಕೆಯುದಿಸಿದಳು. ಆ ಕನ್ನಿಕೆಯು
ಜನಿಸುವಾಗಲೇ ಸಹಜವಾದೊಂದು ಕನಕ ಮಾಲಿಕೆಯಂ ಕಂಠದೊಳ್ ಧರಿಸಿರ್ದುದ
ರಿಂದ ಅದಂ ಕಂಡು ಸಕಲ ಬಂಧುಜನಗಳುಂ ಆಶ್ಚರ್ಯದಿಂದ ಆ ಕನ್ಯಾಮಣಿಯಂ ಕನ
ಕಮಾಲಿನಿಯೆಂದು ಕರೆಯುತ್ತಿರ್ದರು — ಅತಿಸುಕುಮಾರಾಂಗಿಯಾಗಿಯುಂ ಭ್ರಮ
ದ್ಭ್ರಮರಕುಂತಳೆ ಭರಿತೆಯಾಗಿಯುಂ ನೀಲೋತ್ಪಲದಂತೊಪ್ಪುವ ಕಣ್ಗಳಿಂ ಮೃಗಶಾಬ
ಕಂಗಳಂ ಜಯಿಸುವಳಾಗಿಯುಂ ಮದನನ ಶರಾಸನದಂತೆ ಪ್ರಕಾಶಿಸುವ ಪುರ್ಬುಗಳು

ಶೈವಳಾಗಿಯುಂ ದರವಿದಳಿತವಾದ ಸಂಪಿಗೆಯಂತೆ ಎಸಳಾದ ನಾಸಿಕೆಗಳುಂ ಕೆಂದಳಿ ರಂದವು ನೊಂದಿದ ತುಟಿಗಳುಂ ಮಲ್ಲಿಗೆಯರಳಂತೆ ಮನೋಹರವಾದ ಹುಸಿನಗೆ ಯುಂ ಕೆಂದಾವರೆಯಂತೆ ಶೋಭಿಸುವ ಕರಯುಗಳಮುಂ ಹಂಸದಂತೊಪ್ಪುವ ಮೆಲ್ನಡೆ ಯುವಾಗಿ ತ್ರಿಭುವನದೊಳೆಲ್ಲಿಯು ಮಿಲ್ಲದ ಸೌಂದರ್ಯದಿಂ ರತಿದೇವಿಯು ಮಹಾಲ ಕ್ಷ್ಮಿಯಂ ಪೋಲ್ವ ಕನ್ನಿಕೆಯಂ ನೋಡಿ ಕುಶಮಹಾರಾಜನುಂ ಅತಿಹರ್ಷಿತನಾಗಿರುತಿ ರ್ದ್ದಂ ಆ ಕನಕ ಮಾಲಿನಿಯುಂ ತನ್ನ ತಂದೆಗೆ ಕುಲಧನವಾದ ರಾಮಪ್ರಭುವ ಸೌಂದರ್ಯಾತಿಶಯದಿಂ ಮನಂ ಮರುಗಿ ಚಿಕ್ಕಂದಿನೊಳಂ ಅತಿಭಕ್ತಿಯುಕ್ತಳಾಗಿ ತದಾರಾಧನೋಚಿತಂಗಳಾದ ಪುಷ್ಪಮಾಲ್ಯಾದ್ಯಾಹರಣಗಳಿಂದ ಪರಿಚರಿಸುತಿರ್ದಳ್ ಈ ಪ್ರಕಾರವಾಗಿ ಪರಮ ವೈಭವದಿಂ ಕಮಲನಾಭನಂ ಆರಾಧಿಸುತ್ತಿಲು ಕುಶನುಂ ತನ್ನ ನುಜನಾದ ಲವನುಂ ಮತ್ತುಂ ಪಲವುಗಾಯಕ ಕುಲದೊಡಗೂಡಿ ನಿತ್ಯದೊಳುಂ ಆ ರಾಮಪ್ರಭುವ ಸನ್ನಿಧಿಯೊಳ್ ರಾಮಾಯಣಕಥೆಯಂ ಗಾನಮಾಡುತಿರ್ದರು. ಈರೀತಿ ಯಿಂ ಕೆಲವುಕಾಲ ಮಾಗಲಾ ಕನಕ ಮಾಲಿನಿಯು ಅಂಗಂಗಳೊಳು ಉದ್ಯಾನ ಭೂಮಿ ಯೊಳ್ ವಸಂತ ಲಕ್ಷ್ಮಿಯಂತೆ ಯವ್ವನದಸಿರಿ ನೆರೆಯುತ್ತಿರೆ ಮುಗ್ಧಮಧುರವಾಗಿ ಪಸರಿಸುವ ಕಡೆಗಣ್ನೋಟಗಳಿಂದಲುಂ, ಅಂಗಾಂಗಗಳೊಳ್ ಪೊಸಪೊಸತಾಗಿ ತೋರು ವವಿಲಾಸಂಗಳಿಂದಲುಂ ಕಮಲದ ಕೋರಕದಂ ತೆಂಕುರಿಸುವ ಕುಚಯುಗಳದಿಂದಲುಂ ಕುಶಮಹಾರಾಯನು ಮಾ ಕನಕಮಾಲಿನಿಗೆ ವಿವಾಹೋಚಿತ ಕಾಲಮೊಂದಿರ್ದು ಅವಳ ಸೌಂದರ್ಯಾದಿಗುಣಗಳಿಗನುಗುಣವಾದ ವರನಂ ವಿಚಾರಿಸುತೆಲ್ಲಿಯುಂ ದೊರೆಯದೆ ಚಿಂತಾಕ್ರಾಂತನಾಗಿರಲು ಒಂದು ದಿನಂ ರಾತ್ರಿಯೊಳ್ ನಿದ್ರಾವಸಾನ ಸಮಯದಲ್ಲಿ ಸ್ವಪ್ನ ದಲ್ಲಿ ಸೀತಾಸಮೇತನಾಗಿ ಲಕ್ಷ್ಮಣ ಭರತ ಶತ್ರುಘ್ನ ಸಹಿತನಾಗಿರುವ ಶ್ರೀರಾಮನಂ ಕಂಡು ಕುತೂಹಲಾಕ್ರಾಂತ ಹೃದಯನಾಗಿ ಸಂಭ್ರಮದಿಂ ತಂದೆಯ ಪಾದಾರವಿಂದದ ಲ್ಲಿ ತನ್ನ ಮಕುಟಮಂ ಚಾಚಿ ನಮಸ್ಕರಿಸುತಿರಲು ಶ್ರೀರಾಮನುಂ ಆತನ ಕೈಪಿಡಿದೆತ್ತಿ ಮೈದಡವುತ್ತ ಮಂದಹಾಸದೊಡನೆ ಸಂತಾಪಹರವಾದ ಮೃದುಮಧುರ ವಚನಗಳಿಂ ಇಂತೆಂದರು. ಎಲೈ ಕುಶಾಗ್ರದಂತೆ ತೀಕ್ಷ್ಣಬುದ್ಧಿಯುಳ್ಳ ಕುಮಾರನೇ ನಿನಗೆ ಹಿತಕ ರವಾಗಿ ನಿನ್ನ ಮನಮಂ ಬಂಧಿಸಿರುವ ಚಿಂತಾತಂತುಪರಿವಂತೆ ಪೇಳುವೆಂ ಇದನವಧರಿಸು ವುದು ಚಂದ್ರವಂಶೋತ್ಪನ್ನನಾದ ಯದುಶೇಖರನೆಂಬ ರಾಜಕುಮಾರಂ ನಿನ್ನ ಮಗಳಾದ ಕನಕ ಮಾಲಿನಿಗನುರೂಪವಾದವರನಾಗಿರುವಂ ಆತಂಗೀ ಕನ್ನಿಕೆಯನಿತ್ತು ವಿವಾಹ ಮಂ ಬೆಳಸುವುದೆನಲು ತತ್‌ಕ್ಷಣದೊಳ್ ಜನನಿಯಾದ ಜನಕಾತ್ಮಜೆಯುಂ ಪ್ರೀತಿವಿಸ್ತಾ ರಿತವಾದ ನಯನಂಗಳಿಂ ಕುಮಾರನಂ ನೋಡಿ ಎಲೈ ಮಗನೇ ಕನ್ಯಾಪ್ರದಾನ ಮಾಡು ವಸಮಯದಲ್ಲಿ ನಿನ್ನ ಪ್ರೇಮ ಪುತ್ರಿಯು ಆವಾವ ವಸ್ತುಗಳ ನಪೇಕ್ಷಿಸಿದರುಂ ಅವೆಲ್ಲ ವಂ ಕೊಟ್ಟು ಸಂತೈಸುವುದು ಲೋಕದೊಳೆಲ್ಲಿಯುಂ ನಾರಿಯರ್ಗೆ ಪತಿಭವನದೊಳ್ ಸಕಲ ಸಮೃದ್ಧಿಯಿರ್ದರ್ಗಳುಂ ತೌರುಮನೆಯಿಂ ತಂದ ವಸ್ತುಗಳೊಳ್ ಅಭಿಮಾನ

ಮಧಿಕವಾಗಿರುವುದೆಂದು ಪೇಳುತಿರಲಾ ತತ್ಕ್ಷಣದೊಳ್ ನಿದ್ರೆಯಿಂದೆಚ್ಚತ್ತು ಕು
ಶನುಂ ಆಶ್ಚರ್ಯದಿಂ ಸ್ವಪ್ನವೃತ್ತಾಂತ ಮೆಲ್ಲವಂ ತನ್ನ ದೇವಿಗೆ ನಿವೇದಿಸಲವಳುಂ ಅರ
ಳಿದ ಮೊಗದಾವರೆಯುಳ್ಳವಳಾಗಿ ಆ ಸ್ವಪ್ನವೆಲ್ಲವಂ ಮತ್ತೆ ಮತ್ತೆ ಕೇಳುತ್ತ ಲಕ್ಷ್ಯ
ಸಂಪಮುಂ ಪೊಂದಿದಳು — ನಾರದ ನೊರೆವಂ ಎಲೈ ಋಷಿಗಳಿರಾ ? ನಾನು ವಿಷ
ಯಮನರಿತು ಅನುರೂಪವಾದೀ ವಿವಾಹೋತ್ಸವವಂ ಘಟನೆಮಾಡಿ ಆನಂದಿಸಬೇಕೆಂ
ಬ ಕುತೂಹಲದಿಂ ಮಥುರಾನಗರಮನೆಯ್ದಿ ಅಲ್ಲಿ ಪೂರ್ವ ಕಾಲದೊಳ್ ನಾರಾಯಣಾ
ದ್ರಿಯಲ್ಲಿ ಅಶ್ವಮೇಧವಂ ಮಾಡಿ ಶ್ರೀಯಃಪತಿಯಾದ ನಾರಾಯಣನಂ ಆರಾಧಿಸಿ ತತ್ಕ
ಟಾಕ್ಷದಿಂ ಸಾರ್ವಭೌಮ ಪದಮನೊಂದಿ ಸಾಂಬ್ರಾಜ್ಯಂಗೆಯ್ಯುತಿರುವ ಯಾದವಭೂ
ಷಣನೆಂಬ ರಸನುಂ ತನ್ನ ಮಗನಾದ ಯದುಶೇಖರಂಗೆ ಸದೃಶಳಾದ ಕನ್ನಿಕೆಯಂ ವಿಚಾ
ರಿಸಿ ಎಲ್ಲಿಯುಂ ದೊರೆಯದೆ ಚಿಂತಿಸುತಿರಲಾ ತನೊಳಿಂತೆಂದೆನು. ಎಲೈ ರಾಜಶ್ರೇ
ಷ್ಠನೇ ನಿನ್ನ ಕುಮಾರಂಗೆ ರಘುಕುಲ ತಿಲಕನಾದ ಶ್ರೀರಾಮನ ಪುತ್ರನಾದ ಕುಶಮ
ಹಾರಾಯನ ಕನ್ನಿಕೆ ಕನಕ ಮಾಲಿನಿ ಅನ ರೂಪೆಯಾಗಿರುವಳು ನೀನರ್ಥಿಸಲೊಡನೆ
ಕೊಡುವ ನೆನಲಾರಾಯನುಂ ಆನಂದಾರ್ಣವ ದೊಳ್ಮುಳುಗಿ ತತ್ಕ್ಷಣದೊಳ್ ಪುತ್ರನಾದ
ಯದುಶೇಖರನಂ ಕರೆದುಕೊಂಡು ಸಕಲಪರಿವಾರದೊಡಗೂಡಿ ಪಯಣವಂ ಮಾಡಿ
ಅಯೋಧ್ಯಾ ನಗರಮಂ ಪ್ರವೇಶಿಸಿ ಕುಶಮಹಾರಾಜನಿಂ ಬಹುಮಾನಿತನಾಗಿ ರಮಣೀ
ಯವಾದ ಸೌಧದೊಳ್ ಶಾಂತನಾಗಿ ಕುಳಿತು ಕುಶಮಹಾರಾಜ ನೊಳಿಂತೆಂದಂ
ಎಲೈ ಸೂರ್ಯವಂಶ ಶಿಖಾಮಣಿಯೇ ನಾವು ಕನ್ಯಾರ್ಥಿಗಳಾಗಿ ಬಂದಿರುವೆವು. ನಮ್ಮ
ಕುಮಾರಂ ಯದುಶೇಖರನುಂ ವೀರ್ಯಧೈರ್ಯ ಶೌರ್ಯಾದಿಗಳೊಳ್ ಸದೃಶನಾಗಿರುವಂ
ಈ ತಂಗನುರೂಪವಾದ ಕನ್ನಿಕೆಯು ನೆಲ್ಲಿಲ್ಲಿಯು ಮರಸಿ ಕಾಣದೆ ನಿಮ್ಮ ಕನ್ಯಾರತ್ನ
ಮಂ ಸಕಲ ಗುಣಂಗಳಿಂದಲುಂ ನಮ್ಮ ಕುಮಾರಂಗೆ ಸದೃಶವಾಗಿರುವಂತೆ ದೇವಮು
ನಿಯಿಂದರಿತು ಬಂದಿರುವೆಂ ಸೂರ್ಯಚಂದ್ರವಂಶಸ್ಥರಾದ ನಮಿಮ್ಮರ್ವರಿಗುಂ ಸಂಬಂಧ
ಮತಿ ಸುಂದರವೆಂಬುದಂ ತಾವರಿತು ಸುಮುಹೂರ್ತದೊಳ್ ವಿವಾಹಮಂ ಬೆಳಸಬೇ
ಕೆಂದರ್ಥಿಸಲ್ ಕುಶಮಹಾರಾಜನುಂ ಕ್ಷಣಕಾಲ ಮಾಲೋಚಿಸಿ ಸ್ವಪ್ನದೊಳ್ ಶ್ರೀರಾ
ಘವನ ಆಜ್ಞೆಯಂ ಸ್ಮರಿಸಿ ಪರಮ ಹರ್ಷಿತನಾಗಿ ಯಾದವ ಭೂಷಣನಂ ಕುರಿತು
ಎಲೈ ಮಹಾರಾಜನೇ ನೀವಿಂತು ವಿನಯದಿಂದರ್ಥಿಸಲೇಕೆ ತಾನಾಗಿ ನೀವಿರ್ದೆಡೆಗೆ
ಬಂದ ಕನ್ನಿಕೆಯನಿತ್ತು ಪ್ರಸ್ತುತವಂ ಬೆಳಸಲುದ್ಯುಕ್ತನಾಗಿರ್ದೆನು ಆದರೆ ಬಹಳ
ದಿವಸಂಗಳಿಂದಲುಂ ಅನೇಕ ಮೂರ್ಧಾಭಿಷಿಕ್ತ ರಾಜನ್ಯಕುಮಾರಕರ್ ಬಂದುಬಂದು ಅ
ರ್ಥಿಸಿದಾಗಳುಂ ಈ ಕನಕಮಾಲಿನಿಯು ಸುಗುಣಶ್ರೇಣಿಗಳಿಗುಂ ವಿಷ್ಣುಭಕ್ತಿಗು ಮನು
ಗುಣವಾದ ಗುಣಗಳಂ ಕಾಣದೆ ಯೆನ್ನಿಂ ತಿರಸ್ಕೃತರಾಗಿ ಕನ್ಯಾಮಣಿಯಂ ಪೊಂದದೆಭ
ಗ್ನಮನೋರಥರಾಗಿ ಪೋದರು. ಈ ನಿಮ್ಮ ಕುಮಾರರುಂ ಸಕಲ ಕಲ್ಯಾಣಗುಣಂಗಳಿಂ

ಪೂರ್ಣರಾಗಿ ಕನಕಮಾಲಿನಿಗನುರೂಪನಾಗಿರುವುದರಿಂದೀಸುಮುಹೂರ್ತದೊಳ್ ವಿವಾಹೋತ್ಸವಮಂ ಬೆಳೆಸುವೆನೆಂದು ಸಕಲಸಂಭ್ರಮದಿಂ ವಿವಾಹೋತ್ಸವಮಂ ಬೆಳೆಸಿದಂ. ಅನಂತರದೊಳ್ ತನ್ನವಿಭವಕ್ಕಂ ಮನದೌದಾರ್ಯಕ್ಕಂ ಕನಕಮಾಲಿನಿಯೊಳುಂಟಾದಪ್ರೀತಿಗಂ ಸದೃಶವಾಗಿ ಮಗಳಿಗೆ ಬಳಿವಳ್ಳಿಯಾಗಿ ಸ್ವರ್ಣಾಲಂಕಾರಮುಕ್ತ ರಮ್ಯವಾದ ನೂರುರಥಗಳಂ ಮುನ್ನೂರು ದಾಸೀಜನಂಗಳಂ ಸಾಸಿರ ಸಂಖ್ಯೆಯಾದ ಮತ್ತಮಾತಂಗಗಳಂ ಪತ್ತುಸಾವಿರ ಕುದುರೆಗಳಂ ಲಕ್ಷಲಕ್ಷವಾಗಿ ನವರತ್ನಂಗಳಂ ಕೋಟಿಸಂಖ್ಯಾತಮಾದ ವರಹಂಗಳಂಕೊಟ್ಟು ಅತಿವಿಶಾಲವಾಗಿಯುಂ ಸಕಲಸಸ್ಯಸಮೃದ್ಧಮುಮಪ್ಪಿರುವ ಸುಕ್ಷೇತ್ರಮಂ ಕನಕಮಾಲಿನಿಗೆ ಧಾರೆಯೆರೆದುಕೊಟ್ಟನು. ಆಗಲಾ ಕನಕಮಾಲಿನಿಯುಂ ಇದೆಲ್ಲವಂನೋಡಿ ಸಂತೋಷದಿಂ ನಸುನಗುತ ತಾತನಂ ನೋಡುತಿಂತೆಂದಳ್. ಎಲೈತಂದೆಯೇ! ನೀವು ಅತಿಪ್ರೇಮದಿಂಕೊಟ್ಟ ಬಳಿವಳ್ಳಿಗಳೆನಗೆ ಬೇಕಾದುದಲ್ಲವೆನೆ ಕುಶಮಹಾರಾಜನುಂ ಮಹದೌದಾರ್ಯದಿಂ ತನಗಿದು ಸಾಲದೆಂಬಭಿಪ್ರಾಯಮಂ ತೋರುವಳೆಂದೆಣಿಸಿ ಮತ್ತಂ ಅದಕಿಮ್ಮಡಿಯಾಗಿ ಧನಕನಕ ವಸ್ತುವಾಹನಂಗಳನೀಯಲ್ಕೆ, ಎಲೈತಾತನೇ! ನಾನತೃಪ್ತಿಯಿಂ ಕೇಳ್ದವಳಲ್ಲ. ಎನಗಭಿಮತಮಪ್ಪದೊಂದುವಸ್ತುವಂ ಕೊಡುವುದಾದರೆ ಸಂತೋಷಿಸುವೆನೆನಲಾಗಿ ಎಲೈಕನ್ನಿಕೆಯೆ! ನಿನಗುಂ ಕೊಡಲಾರದವಸ್ತುವು ಯಾವದುಮಿಲ್ಲ, ನಿನ್ನಭಿಮತಮಂ ಸಂಕೋಚವಿಲ್ಲದೆ ಪೇಳಿದೊಡದಂ ಸಂದೇಹವಿಲ್ಲದೆ ಮನವೊಪ್ಪಿ ಕೊಡುವೆನೆಂದು ಪೇಳಲಾಕನಕಮಾಲಿನಿಯುಂ ಸಂತುಷ್ಟೆಯಾಗಿ ಬ್ರಹ್ಮನಿಂದಲುಂ ನಿಮ್ಮತಂದೆಯಾದ ಶ್ರೀರಾಮನಿಂದಲುಂ ಆರಾಧಿತವಾಗಿ ನಿಮ್ಮರಮನೆಯೊಳಿರುವ ರಾಮಪ್ರಭುವೆಂಬ ಮಹಾಧನಮಂ ನನಗೆ ಯೌತಕವಾಗಿ ಕೊಡಬೇಕೆಂದು ಕೇಳಿದಳ್. ಅದಂಕೇಳಿ ಕುಶಮಹಾರಾಜನುಂ ಸ್ವಪ್ನದೊಳಾದ ಮಾತೃವಾಕ್ಯಮಂ ಸ್ಮರಿಸಿ ಸಪತ್ನೀಮಾತೆಯಾದ ಕೈಕೇಯಿಯ ವಚನದಿಂ ಹದಿನಾಲ್ಕುವರ್ಷ ವನವಾಸವಂ ಮಾಡಿದ ರಾಮನಿಗೆ ಪುತ್ರನಾಗಿ ನಾಂ ಮಾತೃವಚನದಿಂ ಎನ್ನಕನ್ನಿಕೆಯ ಮನೋರಥಮಂ ಸಲಿಸದಿದ್ದರೆ ಸೂರ್ಯವಂಶಕೊಂದಪಖ್ಯಾತಿ ಬರುವುದೆಂದೆಣಿಸಿ ಮನಸ್ಸಂತೋಷದಿಂ ರಮಾಕಾಂತನಂ ಕನಕಮಾಲಿನಿಗೊಪ್ಪಿಸಿ ಮೊದಲಿತ್ತ ಧನರಾಶಿಗಳೆಲ್ಲಮಂಸಿತ್ತು ಸಕಲ ಸೇನಾ ಸಹಿತವಾಗಿ ದಂಪತಿಗಳಂ ಮಧುರಾನಗರಕೆ ಕಳುಹಿಸಿದಂ.

ಅನಂತರದಲ್ಲಿ ಯದುಶೇಖರನುಂ ಸರ್ವೋತ್ಕೃಷ್ಟವಾದ ಕನ್ಯಾಲಾಭದಿಂದಲುಂ, ಜಗದೀಶ್ವರಂ ತನಗೊಲಿದುಬಂದ ಮಹಾಲಾಭದಿಂದಲುಂ ಸಂತುಷ್ಟನಾಗಿ ಸಕಲ ಸೇನಾ ಸಮೇತನಾಗಿ ಸಕಲ ವೈಭವಂಗಳಿಂದಯೋಧ್ಯಾನಗರದಿಂ ಪೊರಮಟ್ಟು ಬರುತಿರಲ್ ಮಾರ್ಗಮಧ್ಯದೊಳ್ ದುಷ್ಟರಾದ ಕೆಲವು ರಾಜರು ತಮಗೆ ಕನಕಮಾಲಿನಿದೊರೆಯದ ಕೋಪದಿಂದಲುಂ ಯದುಶೇಖರಂಗುಂಟಾದ ಭಾಗ್ಯೋದಯಮಂ ಕಂಡು

ಅಸಹನದಿಂದಲುಂ, ಆ ವಧೂರತ್ನ ವಂ ನಪಹರಿಸಬೇಕೆಂಬ ದುರಾಸೆಯಿಂದಲುಂ, ಯುದ್ಧ ಸನ್ನದ್ಧರಾಗಿ ಬಂದು ಬಾಣವರ್ಷಂಗಳಂ ಕರೆದು ತಡೆಯುತ್ತಿರಲ್ ಘೋರವಾದ ಸಮ ರಾಂಗಣದೊಳ್ ಯದುಶೇಖರಂ ತನ್ನ ಭುಜಪ್ರತಾಪಾಗ್ನಿಯಿಂದಾ ದುಷ್ಟರಾಜರ ಸ ಮೂಹಮಂ ತೂಲರಾಶಿಯಂತೆ ದಹಿಸಿ ಮುಹೂರ್ತಮಾತ್ರದೊಳ್ ಜಯಲಕ್ಷ್ಮಿಯಂ ಕೈಗೂಡಿದನು. ಮತ್ತಮಾಸ ಮರಸನ್ನಾಹದೊಳ್ ರಘುವಂಶ ಕುಲದೈವತವಾದ ರಾಮಪ್ರಿಯರಂ ರಕ್ಷಿಸಲುದ್ಯುಕ್ತನಾದ ಹನುಮಂತನುಂ ಸಾಂಸಮುದ್ರ ಲಂಘನಂ ಗೆಯ್ದು ಲಂಕಾದಹನವಂ ಮಾಡಿದ ಕಾಲದೊಳ್ ತಾಳ್ದರೂಪಮಂ ತಳೆದು ಆ ದುಷ್ಟ ರಾಜರ ಚತುರಂಗಸೇನೆಯಂ ಸವರುತಿರ್ದ್ದಂ, ಇದೆಲ್ಲವುಂ ಆ ಭಗವಂತನ ನಿರವಧಿಕ ಕಟಾಕ್ಷದಿಂದುಂಟಾದುದು. ಈ ಪ್ರಕಾರವಾಗಿ ವಿಜಯಶ್ರೀ ಸಂಪನ್ನನಾದ ಯಾದ ವ ಭೂಷಣನುಂ ನವರತ್ನಖಚಿತವಾದ ಅಂದಣದಲ್ಲಿ ಶ್ರೀ ಭೂದೇವಿಯರೊಡ ಗೂಡಿದ ರಾಮಪ್ರಿಯರಂ ಪುರಸ್ಕರಿಸಿ ದಂಪತಿಗಳೊಡನೆ ಮಹೋತ್ಸವದಿಂ ಮಧು ರಾನಗರಕಭಿಮುಖನಾಗಿ ಬರುತಿರ್ದ್ದಂ ತತ್ಕಾಲದೊಳ್ ಮಧುರಾನಗರ ವಾಸಿಗಳಾದ ಪಾ ರಜನಂಗಳುಂ ಪೌರಪುರಂಧ್ರಿಗಳುಂ ರಾಜಕುಮಾರನ ವಿವಾಹಮಂಗಳವುಂ ಜಗತ್ಪತಿ ಯಾದ ಭಗವಂತನ ಸಮಾಗಮವುಮಂ ಕೇಳಿ ಪರಮಾನಂದ ಭರಿತರಾಗಿ ದಿವ್ಯವಸ್ತ್ರಾಭರ ಣಮಾಲ್ಯ ಗಂಧಾದಿಗಳಿಂದಲಂಕೃತರಾಗಿ ಲಾಜಾಕ್ಷತಫಲ ಕುಸುಮ ಮೊದಲಾದಮಂ ಗಳದ್ರವ್ಯಂಗಳಂ, ನವರತ್ನ ಮುಕ್ತಾಮಯವಾದ ಆರತಿಗಳಂ ಪಿಡಿದು ಇದಿರ್ಗೊಂ ಡು ಬಂದಿರಲು, ಅತಿಗಂಭೀರವಾದ ಭೇರೀಮೃದಂಗ ಪಣವ ಮುರಜಾದಿ ವಾದ್ಯಧ್ವನಿ ಗಳಿಂದಲುಂ, ವೀಣಾವೇಣು ಗೀತಾನುಗತ ವಾದ ನರ್ತಕಿಗಳ ಕಂಕಣ ನೂಪುರಾದ್ಯಾ ಭರಣ ಧ್ವನಿಗಳಿಂದಲುಂ ಪುರಸ್ತ್ರೀಯರುಗಳ ಅನ್ಯೋನ್ಯ ಸಲ್ಲಾಪಗಳು ತಿಳಿಯಲಶಕ್ಯ ವಾಗಿರ್ದುದು. ಮತ್ತಮಾಕಾಲದೊಳ್, ವಂದಿಮಾಗಧಾದಿಗಳೆಲ್ಲರುಂ ಭಗವಂತನ ಆಗ ಮನೋತ್ಸವದಿಂ ಪ್ರಹೃಷ್ಟರಾಗಿ ಭಗವಂತನ ದಿವ್ಯಚರಿತೆಗಳಂ ದೆಸೆದೆಸೆಯೊಳ್ಪೊಗಳು ತಿರಲು ಸಕಲ ಪೌರವೃದ್ಧರುಂ ಬ್ರಾಹ್ಮಣೋತ್ತಮರುಂ ಮಹರ್ಷಿಗಳುಂ ರಾಘವ ಯಾದವ ವಂಶಗಳ ಮಹಿಮೆಗಳಂ ಕೊಂಡಾಡುತ ಲನುಸರಿಸಿ ಬರುತಿರಲ್ ಗಗನಮಂಡಲ ವನತಿಕ್ರಮಿಸುವ ಧ್ವಜಪತಾಕೆಗಳಿಂದಲುಂ, ಪಲ್ಲವ ಕುಸುಮ ಮುಕ್ತಾಜಾಲಕಂಗಳಿಂ, ಸುರಚಾಪಪರಂ ಪರೆಯುಂತಿರುವ ತೋರಣಮಾಲಿಕೆ ಗಳಿಂದಲುಂ, ಕನಕ ಕಲಶಮುದ್ರಿ ತ ಮುಕುರ ದರ್ಪಣ ವಿಚಿತ್ರ ವಿತಾನರಂ ಭಾಸ್ತಂಭಂಗಳಿಂದಲುಂ, ಅಲಂಕೃತವಾದ ಮ ಧುರಾನಗರವಂ ಪ್ರವೇಶಿಸಿ, ಆ ಯಾದವಭೂಷಣಂ ದಿವ್ಯಾಯತನದೊಳ್ ಶ್ರೀರಾಮಪ್ರಿ ಯರಂ ಬಿಜಮಾಡಿಸಿ, ಆರಾಧಿಸುತತಿ ಸಂತೋಷ ದೊಳಿರ್ದ್ದನು. ಅನಂತರದಲ್ಲಿ ಯದುಶೇಖರನುಂ ಕನಕಮಾಲಿನಿಯೊಡಗೂಡಿ ಅತಿಭಕ್ತಿಯಿಂದಾ ರಮಾಕಾಂತನ ನಾ ರಾಧಿಸಿ, ತತ್ಪ್ರಸಾದಾತಿಶಯದಿಂದಖಂಡವಾದೈಶ್ವರ್ಯಮಂ ದಿವ್ಯಭೋಗಂಗಳಂ ಪ ತ್ರಸಂತಾನಾಭಿವೃದ್ಧಿಗಳಂ ಪೊಂದಿದನು. ಅನಂತರದೊಳ್ ಭಕ್ತವತ್ಸಲನಾದ ಭಗವಂತ

ನುಂ ಆ ಯದುವಂಶದೊಳ್ ಪುಟ್ಟಿದ ರಾಜಪರಂಪರೆಗಳಿಂದಾರಾಧಿತರಾಗಿ ಆ ಕ್ರಮದಿಂ ವಸುದೇವಗೃಹದೊಳ್ ಸಕಲ ವಿಬುಧಜನ ಹೃದಯ ಕಮಲಂಗಳ್ ವಿಕಾಸಮನೆಯ್ದುವಂತೆ ದೇವಕೀ ದೇವಿಯೆಂಬ ಪೂರ್ವಸಂಧ್ಯೆಯೊಳ್ ಶ್ರೀಕೃಷ್ಣನೆಂಬ ಬಾಲಸೂರ್ಯನುದಿಸುತಿರಲ್ ಅತಿವಿಚಿತ್ರಮಾಗಿಯುಂ, ಭುವನಪ್ರಖ್ಯಾತಮಾಗಿಯುಂ ಅಮಾನುಷಮಾಗಿಯುಂ, ಪರಸ್ಪರ ವಿರುದ್ಧಮಾಗಿಯು ಮಿರುವ ದಿವ್ಯಲೀಲೆಗಳಂ ಕಟಾಕ್ಷಿಸುತಿರ್ದ್ದರದಾವುವೆಂದರೆ ಈಲೋಕದೊಳ್ ಕರ್ಮಪರವಶರಾದ ಚೇತನರ್ ಗರ್ಭವಾಸದೊಳಿರ್ಪ್ಪಂತೆ ತಾನು ದೇವಕೀಗರ್ಭ ದೊಳಿರ್ದ್ದವನಾಗಿಯುಂ ತನ್ನುದರದೊಳ್ ಚತುರ್ದಶ ಭುವನಮಂ ತಾಯಿಗೆ ತೋರಿದುದಂ ಚೇತನರಿಗಾರಿಂದಲುಂ ಬಿಚ್ಚಲಸದಳವಾದ ಅನಾದಿಕರ್ಮಪಾಶದೃಢ ಬಂಧನಮಂ ಛೇದಿಸುವನಾಗಿದ್ದರುಂ, ಕಡೆಯುವನೇಣಿನಿಂದೊರಳೊಳಿಗುಂ, ತನ್ನುದರಕ್ಕುಂ ಬಿಗಿದಿರ್ದ್ದ ಕಟ್ಟಂ ಬಿಡಿಸಿಕ್ಕೊಳ್ಳಲಾರದಂ ತಳುತಿರುವವಾಯೆಯುಂ ಸಕಲ ಲೋಕಮುಂ ಪಡೆದ ಪಿತಾಮಹನಂ ತಾಂಪಡೆದವನಾಗಿಯುಂ, ಪುತ್ರಾರ್ಥವಾಗಿ ವರವಂ ಬೇಡುವಂತೆ ಓರ್ವನೆಡೆಗೆಪೋಗಿ ಆ ಪ್ರಸ್ತಾವದೊಳ್ ಘಂಟಾಕರ್ಣನೆಂಬಾತಂಗೆ ಮೋಕ್ಷಮಿತ್ತುದಂ ಜರಾಸಂಧ ಸಹಾಯನಾದೊಂದು ಯವನರಾಜಂಗಂಜಿ ಕೋಡಿದಂತಾಗಿ ಮುಚುಕುಂದನೆಂಬ ಮಹಾರಾಜನಿಗೆ ಸದ್ಗತಿಯನಿತ್ತುದಂ ಅನೇಕಸಹಸ್ರ ಸಂಖ್ಯಾತರಾದ ಗೋಪಾಂಗನೆಯರಂ ಮೈಗೂಡಿಯುಂ ಬ್ರಹ್ಮಚರ್ಯವ್ರತಮಳಿಯದಂತಿರ್ದ್ದದಂ, ನವಕೋಟಿ ಸಂಖ್ಯಾತರಾದ ತನ್ನೊಡಲೊಳ್ ಪುಟ್ಟಿದರಂತಾನೆ ಕೊಲಲು ಸಾಯಂಗೆಯ್ದುವಾವನೊಬ್ಬ ಒಡಹಾರ್ವನ ಮಗಂ ಸಾಯಲವನಂ ಯಮನಕೈಯಿಂ ಕಿತ್ತು ತಂದಿತ್ತುದಂ ಅತ್ಯದ್ಭುತವಾದ ವಿಶ್ವರೂಪಮಂ ತೋರಿಯುಂ ಪಾಂಡುರಾಜನ ಮಗಂಗಾಳಾಗಿ ಕುದುರೆಯಂಪಿಡಿದು ನಡೆಸಿದುದಂ ಕ್ಷೀರಾಬ್ಧಿನಾಥನಾದನಿರುದ್ಧನ ಮಹಾ ಪ್ರಮಾಣವಾದ ಕಿರೀಟಮಂ ಧರಿಸಿಯುಂ, ನವಿಲುಗರಿಗಳ ಗೊಂಚಲಂ ಸಿರದೊಳಲಂಕಾರಮೆಂದು ಸೇರಿಸಿಕೊಂಡಿರ್ದ್ದದಂ, ಧರ್ಮಸಂಸ್ಥಾಪನಂ ಗೈಯ್ಯಲವತರಿಸಿಯುಂ, ಗೋವಳತಿಯರಂಕೂಡಿ ಬೆಣ್ಣೆಯಂಕದ್ದು ಜಾರಚೋರನೆನಿಸಿದುದಂ ನಿತ್ಯದೊಳುಂ ಅವ್ಯಾಹತವಾದ ಸರ್ವೇಶ್ವರನೆನಿಪಧಿಕಾರ ಮಿರ್ದರುಂ ಉಗ್ರಸೇನಂಗಧೀನನೆನಿಸಿ ಅವನ ಆಜ್ಞೆಯಂ ಮೀರದಿರ್ದ್ದದಂ— ಬ್ರಹ್ಮರುದ್ರಾದ್ಯರಿಂದಲುಂ ಅರ್ಚಿತವಾದ ಪಾದಪದ್ಮವನಾಗಿದ್ದುಂ ಕುಂತಿಯೇ ಮೊದಲಾದವರ ಕಾಲಡಿಯೊಳ್ ಮಣಿದಿರುವುದಂ ಮತ್ತಮಿಂತು ಆಶ್ಚರ್ಯಕರವಾದ ಅನೇಕ ಲೀಲಾನಾಟಕಂಗಳಂ ಕಟಾಕ್ಷಿಸುತಿರ್ದರೆಂದು ನಾರದರ ವಾಕ್ಯಮಂಕೇಳಿ ಋಷಿಗಳಿಂತೆಂದರ್—

ಎಲೈನಾರದರೇ! ಈ ಕೃಷ್ಣಲೀಲೆಗಳೆಲ್ಲಮಂ ಶ್ರೀ ಭಾಗವತದಿಂ ಕೇಳಿರುವೆವು. ಆದರುಂ ಕ್ಷೀರಾಬ್ಧಿನಾಥನ ಕಿರೀಟಮಂ ಕೃಷ್ಣಂ ಧರಿಸಿದನೆಂದೊಂದು ಕಥೆಯನರುಹಿದಿರಿ. ಆ ಕಥೆಯಂ ಅದರಹೇತುವಂ ನಾವರಿಯೆವು. ಆದುದರಿಂದದಂ ವಿಸ್ತರಿಸಿಪೇಳಿ ಮನದ ಸಂಶಯಮಂ ಪರಿಹರಿಸಬೇಕೆಂದು ಪೇಳಲಾ ನಾರದರಿಂತೆಂದರ್, ಎಲೈ ಋಷಿಗಳೇ! ಪ್ರಹ್ಲಾದನಪುತ್ರನಾದ ವಿರೋಚನನಂ ನೀವು ಕೇಳಿರುವಿರಿ, ಆತನೊಂದುಕಾಲದೊಳ್

ಪ್ರಹ್ಲಾದನ ಅನ್ವಯ ಸಂಬಂಧದಿಂದಧಿಕಮಾದ ವಿಷ್ಣುಭಕ್ತಿಯಂ ನಟಿಸಿ ಕ್ಷೀರಾಬ್ಧಿಮ
ಧ್ಯಮಂ ಸೇರ್ದು ಕೆಲವುಕಾಲಮಲ್ಲಿ ಸೇವಾನಿರತನಾಗಿರ್ದು ಅಲ್ಲಿರ್ಪ ನಿತ್ಯಸೂರಿಗಳಿಗಂ
ನಂಬಿಕೆಯಂ ನುಂಟುಮಾಡಿ ಕ್ಷೀರಾಬ್ಧಿನಾಥನಾದ ಅನಿರುದ್ಧನುಂ ಯೋಗನಿದ್ರೆಯೊಳಿರುವ
ಸಮಯದೊಳೊಬ್ಬರನರಿಯದೆ ದಿವ್ಯಕಿರೀಟಮಂ ಕದ್ದೊಯ್ದು ಪಾತಾಳದೊಳೊಂದು
ಗುಹೆಯೊಳಿರ್ದಂ ಯೋಗನಿದ್ರಾಂತದೊಳನಂತಗರುಡ ವಿಷ್ವಕ್ಸೇನಾದಿಗಳೆಲ್ಲರುಂ ಶ್ರೀ
ವಲ್ಲಭನ ದರ್ಶನಂಮಾಡಿ ಕಿರೀಟಮಂ ಕಾಣದೆ ಸಂಭ್ರಮಯುಕ್ತರಾಗಿ ಬಹಳಭಯದಿಂ
ಎಲೈ ಸ್ವಾಮಿಯೇ ಮಹಾರ್ಘ ವೈಡೂರ್ಯಖಚಿತವಾದ ಕಿರೀಟಮೆಲ್ಲಿ ಪೋದುದೆಂದು
ಕೇಳಲಾ ಜಗತ್ಪತಿಯುಂ ಸರ್ವಜ್ಞನಾಗಿರ್ದೊಡಂ ಪೇಳ್ವನರಿಯದಂತೆ ನಾಂ ಮೈಮ
ರೆತು ನಿದ್ರೆಗೈಯ್ವಾಗ ಆವುದನರಿವೆಂ? ಎಂದು ಪೇಳಲಾಗಿ ನಿತ್ಯಸೂರಿಗಳೆಲ್ಲರುಂ ಪರ್ಯಾ
ಲೋಚನೆಯಂ ಮಾಡಿ ಪ್ರಾಯಶಃ ಈ ಕಿರೀಟಮಂ ವಿರೋಚನಂ ಕದ್ದಿರುವಂ. ಅ
ವನಸುರವಂಶದವನಾಗಿಯುಂ ಯಾವಾಗಲೂ ನಡೆನುಡಿ ನೋಟ ಚೇಷ್ಟೆಗಳಲ್ಲಿ ಕಪ
ಟಮಂ ತೋರುತಿರ್ದುದು. ಭಗವತ್ಸೇವಕರನಿಬರುಮಿಲ್ಲಿಯೇ ಇರುವರ್. ಆತನಿ
ಲ್ಲಿಯೋ ಪಲಾಯನಮಾಡಿರುವಂ. ಆದ್ದರಿಂ ವಿರೋಚನನೇ ಚೋರನೆಂದು ನಿಶ್ಚ
ಯಿಸಿ ಯೆಲ್ಲರುಂ ಸೇರಿ ಗರುಡನಂ ಕರೆದು ಎಲೈ ವಿನತಾನಂದನನೇ! ನಮ್ಮೆಲ್ಲರೊಳುಂ,
ನೀನೇ ವೇಗಶಾಲಿಯಾಗಿಯುಂ ಬಲಶಾಲಿಯಾಗಿಯುಂ ಬುದ್ಧಿವಂತನಾಗಿಯುಂ ಮಿರುವಿ.
ಆದುದರಿಂ ಆ ಅಸುರನೆಲ್ಲಿ ಪೋಗಿದ್ದರೂ ಕಂಡು ಆತನಂ ಬಡಿದು ದಿವ್ಯಕಿರೀಟಮಂ
ತಂದು ಸ್ವಾಮಿಗೊಪ್ಪಿಸುವುದು. ತ್ರಿಭುವನದೊಳು ನಿನಗಿದಿರಾಗುವವರಾರು? ಅಮೃ
ತಾಹರಣಮಂ ಮಾಡಿದಸಾಮರ್ಥ್ಯಮಂತೋರುವುದಕೆ ಇದೊಂದು ಸಮಯ ಒದಗಿತೆಂದು,
ಪೇಳಲು ಗರುಡನುಂ ತತ್ಕ್ಷಣದೊಳುತ್ಸಾಹದಿಂ ಪೊರಮಟ್ಟು ಮೂರು ಮುಹೂರ್ತ
ದಿಂ ಮೂರುಲೋಕಮಂ ಸುತ್ತಿ ಎಲ್ಲಿಯುಂ ಕಾಣದೆ ಪಾತಾಳಲೋಕದೊಳೊಂದಂಧಕಾರ
ಪ್ರಚುರವಾದ ಗುಹೆಯೊಳ್ ಥಳಥಳಿಸುವ ವಜ್ರಪ್ರಭೆಗಳಂ ಕಂಡು ಅದರೊಳಗೆ ಪೊಕ್ಕು
ವಿರೋಚನನಂ ಕಂಡಾರ್ಭಟಿಸಿದನು. ಅದಂ ಕೇಳುತಾ ವಿರೋಚನನೆದ್ದು ಬಂದು ಖ
ತಿಯಿಂ ಯುದ್ಧಸನ್ನದ್ಧನಾಗಿ ನಿಲ್ಲಲು ಗರುಡನುಂ ವಜ್ರಪಾತಕ್ಕೆ ಸದೃಶವಾದ ತನ್ನ
ಪಕ್ಷಾಘಾತದಿಂದ ಆ ವಿರೋಚನನಂ ಬಡಿಯಲು, ಮಹಾವೀರರಾದ ಅವರಿಬ್ಬರಿಗುಂ
ಭಯಂಕರವಾದ ದ್ವಂದ್ವಯುದ್ಧಮುಂಟಾಯಿತು. ಮುಹೂರ್ತಮಾತ್ರಂ ಆ ವೈನತೇ
ಯಂ ದೈತ್ಯೇಂದ್ರನೊಡನೆ ಲೀಲಾಯುದ್ಧಮಂ ಮಾಡುತಿರ್ದು, ಸ್ವಾಮಿಕಾರ್ಯದೊಳ್,
ತ್ವರಿತನಾಗಿ ಅಂಕುಶದಂತೆ ವಕ್ರಮಾಗಿಯುಂ, ಅಯೋಘನಮಾಗಿಯುಂ, ಅತಿ
ತೀಕ್ಷ್ಣಮಾಗಿಯುಂ, ಇರುವ ತನ್ನಕೊಕ್ಕಿನಗ್ರಭಾಗದಿಂದ ಆ ವಿರೋಚನನ ಫಾಲಪ
ಟ್ಟೆಯಂ ಕುಟ್ಟಿದನು. ತತ್ಕ್ಷಣದೊಳಾ ದಾನವಂ ರುಧಿರಾವಸಿಕ್ತ ಸರ್ವಾಂಗನಾಗಿ
ಮೂರ್ಛಾಕ್ರಾಂತನಾಗಿ ಬೀಳಲ್, ವಿನತಾನಂದನನಾನಂದದಿಂ ಕಿರೀಟಮಂ ತೆಗೆದುಕೊಂ
ಡಾಕಾಶಮಾರ್ಗದೊಳ್ ಬರುತಿರಲ್, ಮುಂದುಗಡೆಯಲ್ಲಿ ಜಲಭರಿತ ಜಲಧರಾವಳಿಯಂತೆ

ಅವ್ಯಕ್ತಶ್ಯಾಮಳವಾದ ಒಂದಾನೊಂದು ಕಾಂತಿಯು ನಭೋಮಂಡಲಮೆಲ್ಲಮಂ ಬ್ರಹ್ಮಾಂಡದವರೆಗು ವ್ಯಾಪಿಸುತಿರಲಾಗಿ, ಆ ಕಾಂತಿಯಿಂ ಕಣ್ಗತ್ತಲೆಯಾಗಿ ಗರುಡನುಂ ಮುಂದರಿಯದೆ ನಾಲ್ಕುದಿಕ್ಕುಗಳಂ ನೋಡಿ ಭೂತಳದೊಳ್ ದೃಷ್ಟಿಯಿಟ್ಟು ಬೃಂದಾವನ ಪ್ರದೇಶದಲ್ಲಿ ಗೋಪಗೋಪೀಜನ ಪರಿವೃತನಾಗಿ, ಕರ್ಣಾಂತಾಯತನೇತ್ರಾಂತದಿಂ ಪ್ರಸರಿಸುವ ಕಟಾಕ್ಷವಿಕ್ಷೇಪಗಳಿಂ, ಗೋಪಿಕಾಸ್ತ್ರೀಯರುಗಳಿಗೆ ನವನವ ರತಿಭಾವಗಳಂ ಸೂಚಿಸುತ್ತಂ, ವ್ಯತ್ಯಸ್ತ ವಿನ್ಯಸ್ತವಾದ ಪಾದಪಲ್ಲವದಿಂ ತ್ರಿಭಂಗೀಮಧುರವಾಗಿನಿಂದು ನಿಜಾಧರಾಮೃತ ಪಾನಜನಿತಾನಂದ ಪಲ್ಲವಿತವಾದ, ವೇಣುವಿನ ರಂಧ್ರಂಗಳೊಳ್ ಕಿರುಬೆರಳ್ಗಳಿರಿಸಿರಿಸಿ ತೆತ್ತತ್ತಾ ಅಡಿಗಡಿಗೆ ನಾಲಿಗೆಯಿಂ ಚಂದ್ರಿಕೆಯ ನೇವರಿಸುತ್ತಂ, ಮುಸಿನಗೆಯಂ ತೋರಿಸುತ್ತಂ, ಹುಬ್ಬುಗಳನೆಗಹುತ್ತಂ, ಕರ್ಣಕುಂಡಲಮುಲುಗೆ ರಾಗಾಳಾಪನಂಗಳ ನಭಿನಯಿಸಿ ತೋರುತಂ, ಮೆಲ್ಲಮೆಲ್ಲಂಬಿಟ್ಟು ಮೊಗವೆತ್ತಿ ನೆಟ್ಟುದರ್ಕಿಸಿಗಳುಂ, ಬಿಟ್ಟಕಣ್ಗಳವಾಗಿ ಅರೆನಿದು ಕಡೆಬಾಯಿಂ ಸೋರುವೆಳೆವುಲ್ಲಿನ ಕಬಳಮುವಾಗಿ ಚಿತ್ರದೊಳ್ ಬರೆದಂತಿರುವ ಗೋವತ್ಸಂಗಳಂ, ಜಾತಿವೈರಮಂ ಬಿಟ್ಟು ಅವರೊಳ್ಪೆರಮೈತ್ರ್ಯಮರೆತು ನಿಂದಾಲಿಸುವ ಸಿಂಹ ವ್ಯಾಘ್ರ ವರಾಹ ಮಹಿಷಾದಿ ವನಮೃಗಂಗಳಂ ಸಕಲಚೇತನಾಚೇತನಂಗಳಂ, ಪರವಶವಾಗಿ ಮಾಡುತ್ತಂ, ವೇಣುಗಾನ ವಿನೋದದೊಳಿರ್ದ ನೀಲೋತ್ಪಲದಳಕಾಂತಿಯಂ ಗೆಲ್ದ ಗೋಪಿಕಾಸ್ತ್ರೀಯರ ಕಣ್ಗಳಕಾಂತಿಯಂ ದ್ವಿಗುಣಿತಶ್ಯಾಮಳವಾದ ದೇಹಕಾಂತಿಯಿಂದೊಡಗೂಡಿ ನವಿಲುಗರಿಗಳತಂಡೆಯಿಂ ಕೊಂಡೆಗಟ್ಟಿ, ಗುಲುಗಂಜಿಯ ಸರಗಳಂಧರಿಸಿ ನವ್ಯಕುಸುಮಾವತಂಸನಾಗಿ, ರಾಸೋತ್ಸವದೊಳಿರ್ದ ನಂದಕುಮಾರಕನಂ ಕಂಡು ಮನದೊಳಿಂತೆಂದನು. ಆಹಾ! ಕ್ಷೀರಾಬ್ಧಿನಾಥನಲ್ಲಿ ನಂದಕುಮಾರ ಭಾವನನೊಂದಿ ಲೀಲಾಮಾನುಷವಿಗ್ರಹನಾಗಿ ಅಮಾನುಷ ದಿವ್ಯಲೀಲೆಗಳಂ ತೋರುವನಾದುದರಿಂದೀ ದಿವ್ಯ ಕಿರೀಟವಂ ಈ ಬಾಲಕನ ಶಿರದೊಳ್ ಧರಿಸಿದೊಡೆ ಕ್ಷೀರಾಬ್ಧಿನಾಥನೆನ್ನಂ ಮೆಚ್ಚುವನೆಂದು ಆಲೋಚಿಸಿ, ಲಕ್ಷಯೋಜನದುನ್ನತವಾಗಿ ಕ್ಷೀರಾಬ್ಧಿಮಧ್ಯದೊಳ್ ನಾಗಶಯನದೊಳ್ ಪವಡಿಸುವ ಭಗವಂತನ ಮಕುಟಪ್ರಮಾಣಕ್ಕನುಗುಣವಾದ ಕಿರೀಟವಂ ಬಾಲಕನ ಶಿರದೊಳಿರಿಸಲದು ಆ ಶ್ರೀಕೃಷ್ಣನಮುಡಿಗೆ ಸಮಪ್ರಮಾಣವಾಗಿರಲ್ ಗರುಡನುಂ ಸಂತೋಷಿಸಿ, ಪ್ರದಕ್ಷಿಣ ನಮಸ್ಕಾರವಂ ಮಾಡುತನುಮತಿಗೊಂಡು, ಕ್ಷೀರಾಬ್ಧಿಯಂನೆಯ್ದಿ, ಸಕಲಸೂರಿಗಳ ಮಧ್ಯದೊಳ್ನಡೆದ ವೃತ್ತಾಂತಮಂ ಬಿನ್ನವಿಸಲ್, ಕ್ಷೀರಾಬ್ಧಿನಾಥನಾಲೈಸಿಕೇಳ್ದು ಸಂತೋಷದಿಂ ಗರುಡನಂನೋಡಿ ನೀನೆನ್ನವತಾರರಹಸ್ಯಂಗಳ ನರಿತಿರುವಿಯೆಂದು ಪ್ರಶಂಸಿಸಿದರು. ಈ ಪ್ರಕಾರವಾಗಿ ಕ್ಷೀರಾಬ್ಧಿನಾಥನ ಅನಿರುದ್ಧಕಿರೀಟವಂ ಕೃಷ್ಣಂಧರಿಸಿ ತನಗೆ ಕುಲಾರಾಧ್ಯರಾದ ಶ್ರೀರಾಮಪ್ರಿಯರಿಗೆ ಸಮರ್ಪಿಸಲು, ತತ್‌ಕ್ಷಣದೊಳಾಕಿರೀಟವುಂ ಆ ದಿವ್ಯಮೂರ್ತಿಯ ಉತ್ತಮಾಂಗಕೊಪ್ಪಿರಲ್ ವಿಸ್ಮಿತನಾಗಿ ಕೆಲವುಕಾಲವಾರಾಧಿಸುತಿರ್ದಂ. ಕೇಳಿರ್ಕೆ

ಋಷಿಗಳಿರಾ! ಈ ಕಿರೀಟದ ಮಹಿಮೆಯಂ ಕೇಳಿ ಇದಂ ಧರಿಸಿರುವ ಭಗವಂತನಂ ಸೇವಿಸುವವರ್ಗೆ ಈ ಲೋಕದೊಳ್ಪುತ್ರಪೌತ್ರಾದಿ ಸಂಪತ್ಸಮೃದ್ಧಿಯುಂಟಾಗಿ ಅನಂತರದೊಳ್ಮೋಕ್ಷ ಸಾಂಬ್ರಾಜ್ಯಂ ಕೈಗೂಡುವದೆಂದು ನಾರದರವಾಕ್ಯಮಂ ಕೇಳಿ ಋಷಿಗಳೆಲ್ಲರುಂ ಸಂತೋಷದಿಂ ಮುಂದಿನಕಥೆಯಂ ಸರುಕೆಂಬೊಡಾತನಿಂತೆಂದಂ. ಒಂದಾನೊಂದುಕಾಲದೊಳ್ಬಲಭದ್ರಂ ಕಾರಣಾಂತರದಿಂ ತೀರ್ಥಯಾತ್ರೆಗೆಯ್ದು ಸಕಲಮುನಿಗಣ ಸಂವೃತನಾಗಿ ನಾರಾಯಣಾದ್ರಿಗೆಬಂದು ಕೆಲವು ದಿವಸಂ ಶ್ರೀಮನ್ನಾರಾಯಣನಂ ಆರಾಧಿಸುತ್ತಲಿರ್ದು ಮರಳಿ ದ್ವಾರಕಾಪುರದ ನೆಯ್ದಿ ಶ್ರೀಕೃಷ್ಣನಂ ನೋಡುತಿಂತೆಂದಂ ಎಲೈ ತಮ್ಮನೆ ! ದಕ್ಷಿಣದೇಶದೊಳೊಂದು ಮನೋಹರವಾದ ಪರ್ವತಮಿರುವುದು ಅದರ ಶೃಂಗದೊಳ್ ರಮಣೀಯವಾದೊಂದು ಸರೋವರಮಿರುವದು, ಅದರತೀರದೊಳ್ ದಿವ್ಯವಿಮಾನ ಮಧ್ಯದೊಳ್ ಅತಿಸೌಂದರ್ಯ ನಿಧಿಯಾದೊಂದು ವಿಷ್ಣುಮೂರ್ತಿ ಯಿರುವುದು. ಅದರ ಸೌಂದರ್ಯ ಸೌಕುಮಾರ್ಯ ಲಾವಣ್ಯಗಳ್ ನಮ್ಮಕುಲಧನವಾದ ರಾಮಪ್ರಿಯನ ಚೆಲುವಿಕೆಗೆ ಸದೃಶವಾಗಿರುವುದೆನಲ್ ಸ್ವಾಮಿಾ! ಅಣ್ಣಂದಿರೇ ಇದೇನು ಪ್ರಶಂಸೆಗೈಯುತ್ತಿರುವಿರಿ? ನಮ್ಮದೇವರ ಸೌಂದರ್ಯಕೆಣೆಯಾದುದು ಮೂರುಲೋಕದೊಳ್ಳಿನ್ನಾದರುಮಿರುವುದೆ? ಹಾಗಿಲ್ಲವೆಂದುಪೇಳಲದಂ ಕೇಳಿ ಬಲಭದ್ರನುಂ ಎಲೈಕೃಷ್ಣನೇ ! ನಾನೇನಾದರುಂ ಪುಸಿಯನಾಡಿದುದುಂಟೆ ? ದಿಟವಾಗಿಯುಂ ಇದರ ಹೋಲಿಕೆಯಂ ನೋಡಿರುವೆನು. ಇದಕೆಲವಪ್ರತಿಜ್ಞೆಯಾದರುಂ ನಾಂ ಮಾಡುವೆನೆನಲ್, ಆದರೆ ಈ ದಿವ್ಯಮಂಗಲವಿಗ್ರಹಮಂ ಅಲ್ಲಿರುವಭಗವಂತನಮುಂದೆ ನಿಲಿಸಿಹೋಲಿಸಿ ನೋಡದೆ ನಾ ನೊಪ್ಪೆನೆಂದ ಅಗ್ರಜನೊಡನೆ ಪಂಥವಂಮಾಡಿ ಆ ಭಗವಂತನಂ ಬಿಜಮಾಡಿಸಿಕೊಂಡು ಸಕಲಯಾದವರೊಡನೆ ನಾರಾಯಣಾದ್ರಿಗೆಬಂದು, ತಿರುನಾರಾಯಣಸ್ವಾಮಿಯವರ ಮುಂದುಗಡೆಯಲ್ಲಿ ರಾಮಪ್ರಿಯರಂ ಬಿಜಮಾಡಿಸಿ ಸೇವಿಸಲು ಯಾವಅವಯವಗಳೊಳಗುಂ ಒಂದು ಕಲಾಮಾತ್ರವಾದರುಂ ವ್ಯತ್ಯಾಸವಿಲ್ಲದೆ ಏಕರೂಪವಾಗಿರ್ದುದಂನೋಡಿ ಬಲರಾಮನುಂ, ಶ್ರೀ ಕೃಷ್ಣನುಂ, ಕಲಹಮಂಬಿಟ್ಟುಇಂತೆಹಸರ್ವೋತ್ಕೃಷ್ಟ ಮೂರ್ತಿಗಳೆರಡುಂ ಒಂದೇ ಆಸ್ಥಾನದೊಳ್ ವಿರಾಜಿಸುವುದರಿಂದಧಿಕವೈಭವಮುಳ್ಳ ಉಭಯಮೂರ್ತಿಗಳನುಂ ಬಹುಕಾಲವಾರಾಧಿಸುತಿರ್ದರ್. ಅನಂತರದೊಳ್ ಯದುವಂಶದ ರಾಜರೆಲ್ಲರುಂ ಅನ್ವಯಕ್ರಮದಿಂದಾಪರ್ವತದೊಳ್ ಭಗವತ್ಸೇವೆಯಂ ಮಾಡುತಿರ್ದಕಾರಣದಿಂ ದಾಪರ್ವತಕ್ಕೆ ಯಾದವಗಿರಿಯೆಂಬ ಪೆಸರುಂಟಾಯಿತು. ಈ ಪ್ರಕಾರವಾಗಿ ಶ್ರೀ ನಾರಾಯಣನ ಹೃದಯೋದ್ಭವನು ಸತ್ಯಲೋಕದಿಂ ಸೂರ್ಯಚಂದ್ರವಂಶಗಳಿಂ ದಾರಾಧಿತರಾಗಿ ಪುನಃ ನಾರಾಯಣನೊಡನೆ ಸಮಾಗಮವನೆಯ್ದಿದಕಥೆಯಂ ಕೇಳಿದವರಿಗುಂ, ಪೇಳಿದವರಿಗುಂ, ಈ ಲೋಕದೊಳ್ ಪುಣ್ಯಶಾಲಿಯಾಗಿಯುಂ, ಗುಣಶಾಲಿಯಾಗಿಯುಮಿರುವ ಪುತ್ರಸಂತಾನಮುಂ, ಕನಕಮಾಲಿನಿಯೆನಿಸುವ ಕನ್ಯಾಸಂತಾನಮುಂ, ಧನಧಾನ್ಯ ಸಮೃದ್ಧಿಗಳುಮುಂಟಾ

ಗುವದು. ಅಂಥವರಿಗೆ ಇಹಲೋಕದೈಶ್ವರ್ಯಮುಂ, ಪರಲೋಕದೈಶ್ವರ್ಯಮುಂ, ಶ್ರೀ ರಾಮಕಟಾಕ್ಷದಿಂದಲುಂ, ಶ್ರೀ ಕೃಷ್ಣಕಟಾಕ್ಷದಿಂದಲುಂ, ಅವಿಚ್ಛಿನ್ನವಾಗಿರುವುದು, ಮತ್ತಮಾ ನಾರಾಯಣಾದ್ರಿಯೊಳ್ ನಿವಾಸಿಸುವ ಭಾಗವತೋತ್ತಮರೊಳಪರಾಧಮಂ ಮಾಡ್ದನಕರ್ಮಗಳಿಂದಲುಂ ತ್ಯಜಿಸಿ ಅವರನತಿಭಕ್ತಿಯಿಂದಾರಾಧಿಸಿದವರ್ಗಂ ಪೂರ್ವೋಕ್ತಮಾದಫಲಂಗಳ್ ಸಿದ್ಧಿಸುವುದು.

---

ಶ್ರೀಃ

## ಏಳನೆಯ ಅಧ್ಯಾಯವು.

---

ವೃ॥ ಬರಿದಾಯಿತ್ತಾಗಮ ಶಾಸ್ತ್ರಪಾರತೆಲೆಗಾಣಲಿಲ್ಲ ನಾನಾರ್ಥ
ಧ್ವರ೯ | ಸಿರಿಕೈಬಿಟ್ಟಿತು ದಾನವಗಣ್ಯದುರಿತವನ್ನ ದೂರದೋ
ಷನಿಂದುದೈ ॥ ಹರಿನಿನ್ನ ಪಾದಸರೋಜ ಕಿಂಕರಪರಿಭಾವಿನ್ಸೋದ್ಭ
ವಂಭಾವಿಸಲ್ | ದುರಿತಂ ಕ್ರೂರಮದೆಂತುಟೋ ಯದುಗಿರಿ ಶ್ರೀ
ನಾಥನಾರಾಯಣಾ॥

ಅನಂತರದಲ್ಲಿ ಋಷಿಗಳೆಲ್ಲರುಂ ಎಲೈಸುರಮುನೀಂದ್ರನೇ ? ಭಗವಂತನಸೇವಾಗೆ ಮನವಂಕೇಳ್ ಧನ್ಯರಾಗಿಯುಂ, ಕೃತಾರ್ಥರಾಗಿಯುಂ, ಆನಂದಪರವಶರಾಗಿಯು ಮಾದೆವು. ಈ ಕಥೆಯಂ ತಾವುಬಣ್ಣಿಸುವ ಸೊಗಸಿನಿಂನಾವು ಪ್ರತ್ಯಕ್ಷವಾಗಿ ಕಂಡನುಭವಿಸುವಂತಾದುದು. ಆದೊಡಂ ಆ ನಾರಾಯಣಾದ್ರಿಯೊಳ್ ವಾಸವಾಗಿರ್ಪ ಭಗವದ್ಭಕ್ತರೊಳಪರಾಧಮಂ ಮಾಡಿದವರಾರು ? ಅದರಿಂದೇನು ಕಷ್ಟಮನನುಭವಿಸಿದರು ? ಆ ವೃತ್ತಾಂತಮಿದೆರ್ಡೆ ಅರುಹಬೇಕೆನಲಾ ನಾರದನಿಂತೆಂದಂ. ಎಲೈಪರಮಋಷಿಗಳಿರಾ ? ಇದಕ್ಕುದಾಹರಣವಾಗಿ ಪೂರ್ವದೊಳ್ಳೊಂದಿತಿಹಾಸಮುಂಟು. ಅದಂ ನಮ್ಮಾಚಾರ್ಯರಾದ ಸನತ್ಕುಮಾರರು ಅಡಿಗಡಿಗೆ ನನಗೆ ಬೋಧಿಸುತಿರ್ದರು. ಅದಂಪೇಳುವೆಂ ಸಾವಧಾನವಾಗಿ ಕೇಳ್ವುದು. ಪೂರ್ವದೊಳ್ ಚತುರ್ವೇದಿಯೆಂಬ ಬ್ರಾಹ್ಮಣನು ಬಹಳಪ್ರಾಜ್ಞನಾಗಿಯುಂ ನಾಲ್ಕುವೇದಗಳಂ ಶಾಸ್ತ್ರಗಳಂ ಅಧಿಕರಿಸಿ ಬಂದಾನೊಂದುರಾಜನಿಗೆ ಪುರೋಹಿತನಾಗಿ ಅವನಪ್ರೀತಿಗೆ ಪಾತ್ರನಾಗಿರ್ದನು, ಮತ್ತಂ ವೇದವಿಹಿತವಾದ ಕರ್ಮಂಗಳೊಳ್ ನಿಪುಣನಾಗಿರ್ದರುಂ ವಿಷ್ಣುಭಕ್ತಿಯಂ ಮಾಡದೆ ನಾರಾಯಣನಿಗೆ ಭಕ್ತರಾದವರಲ್ಲಿ ಭಕ್ತಿಯುಂ ಮಾಡದೆ, ದೇವತಾಂತರಂಗಳಂ ಭಜಿಸಿ ನಿಯುತವ್ರತರಾದ ವೈಷ್ಣವರಂ ನಿಂದಿಸುತ್ತಲುಂ, ಅತ್ಯತಿಮಾತ್ರಾಕ್ಷೇಪಿಯಿಂ

ಸರ್ವಜ್ಞತೀರ್ಥನೆಂಬ ಹೆಸರನಿಟ್ಟುಕೊಂಡು ಡಂಭಾರ್ಥವಾಗಿಯೇ ಪ್ರತಿಸಂವತ್ಸರಗಳೊಳುಂ ಯಾಗಾದಿಗಳಂ ಮಾಡುತಿರ್ದಂ. ರಾಜಾಶ್ರಯಬಲದಿಂದ ಆತಂಗೆ ಅಧಿಕವಾದ ಧನವಿರ್ದುದು, ಆ ಧನಮದದಿಂದಲೂ, ವಿದ್ಯಾಮದದಿಂದಲೂ, ಅಧಿಕಾರಮದದಿಂದಲೂ, ಸಾತ್ವಿಕರಂ ತಿರಸ್ಕರಿಸುತಿರ್ದನು. ಆತನ ನಾಲ್ಕು ಮಂದಿ ಮಕ್ಕಳು ಅವನಂತೆ ವಿದ್ಯಾವಂತರಾಗಿರ್ದುಂ ಗುಣಗಳೊಳುಂ ಅವನಂತೆಯಿದ್ದರ್. ಈ ಪ್ರಕಾರಮಿರಲೊಂದು ದಿನಂ ಆ ಚತುರ್ವೇದಿಯು ಪಿತೃಶ್ರಾದ್ಧಮಂ ಮಾಡಲಾರಂಭಿಸಿ, ತನಗಿಷ್ಟರಾಗಿತನ್ನಂತೆ ವಿಷ್ಣುಭಕ್ತಿವಿಹೀನರಾಗಿರುವ, ಬ್ರಾಹ್ಮಣರೊಡನೆ ಮನೆಯೊಳಿರ್ದಂ. ಈ ಸಮಯದಲ್ಲಿ ವಿಷ್ಣುಭಕ್ತಿಪರಾಯಣನಾಗಿ ವರ್ಣಾಶ್ರಮಾಚಾರನಿಷ್ಠನಾಗಿ ಶಮದಮಾದಿಗುಣಗಳಿಂ ಪೂರ್ಣನಾಗಿ ಸರ್ವಭೂತಂಗಳಲ್ಲುಂ ದಯಾರ್ದ್ರಹೃದಯನಾಗಿ ಮಾನಾವಮಾನಗಳೊಳಗಂ ಲಾಭಾಲಾಭಗಳೊಳಗಂ ಸುಖದುಃಖಗಳೊಳಗಂ, ಸಮಬುದ್ಧಿಯುಳ್ಳ ಹರಿನೀತನೆಂಬ ಬ್ರಾಹ್ಮಣಂ ತನ್ನ ಬಾಲಕರೊಡನೆ ನಾರಾಯಣಾದ್ರಿಗೆ ಬಂದು ಅಲ್ಲಿ ಕೆಲವು ಕಾಲಂ ವಾಸಮಿರ್ದು ಗ್ರಾಮಾಂತರಪ್ರಯಾಣಾಸಕ್ತನಾಗಿ ಮಾರ್ಗವಶದಿಂ ಚತುರ್ವೇದಿಯಿರುವ ಗ್ರಾಮಮಂ ಪ್ರವೇಶಿಸಿದನು. ಆಗಲಾ ಬ್ರಾಹ್ಮಣಶ್ರೇಷ್ಠನು ದೂರಪ್ರಯಾಣದಿಂ ಬಳಲಿ ಬಿಸಿಲಿನಿಂದಲುಂ ಹಸಿವಿನಿಂದಲುಂ, ಸೊರಗಿದ ಬಾಲಕನ ಆಯಾಸಮಂ ನೋಡಿ ತಾನುಂ ದುರ್ಬಲನಾಗಿಯುಂ, ವೃದ್ಧನಾಗಿಯು ಮಿರುವುದರಿಂದ ಯಾವದೊಂದು ಮಾರ್ಗವನರಿಯದೆ ವಿಶ್ರಮಾರ್ಥವಾಗಿ ಚತುರ್ವೇದಿಯ ಮನೆಯಂ ಪೊಕ್ಕು ಅಲ್ಲಿ ಅನೇಕವಾಗಿ ಬ್ರಾಹ್ಮಣರೊಡಗೂಡಿ ಸ್ನಾತನಾಗಿ ವೈದಿಕಕಾರ್ಯದೊಳ್ ನಿರತನಾಗಿರುವ ಚತುರ್ವೇದಿಯು ಕಂಡು ಅವನ ವೇಷಭಾಷಾದಿಗಳಿಂದ ಬಹಳ ಪಾರಮಾರ್ಥಿಕನೆಂದೆಣಿಸಿ ತಿರುನಾರಾಯಣಸ್ವಾಮಿಯವರ ಚರಣಾರವಿಂದದೊಳ್ ಅರ್ಚಿತವಾದ ತುಲಸೀಪ್ರಸಾದಮಂ ಕೈಯಿಂದೆತ್ತಿ ಆತನಿಗೆ ಕೊಡಲುದ್ಯುಕ್ತರಾದರು. ಆಗಲಾ ಚತುರ್ವೇದಿಯು ಬಹಳ ಮದಾನ್ವಿತನಾಗಿ ತನಗೆ ಸಂಭವಿಸುವ ಆಪತ್ತುಗಳ ಪರಂಪರೆಯನರಿಯದೆ ಎಲೈ ಬ್ರಾಹ್ಮಣನೆ? ಇದೇನು ನಾನು ಸ್ನಾನಮಾಡಿ ಶುಚಿಯಾಗಿರುವೆನು, ನೀನಾದರೋ ಮಾರ್ಗಸಂಚಾರದಿಂ ಮೈಲಿಗೆಯಾಗಿರುವಿ, ನಿನ್ನ ಕೈ ಸೋಕಿದ ತುಲಸಿಯಂ ನಾನು ಮುಟ್ಟಬಹುದೆ? ಆದುದರಿಂ ನಾಂ ತೆಗೆದುಕೊಳ್ಳುವದಿಲ್ಲವು ಒಂದು ವೇಳೆ ಇದನ್ನು ಕೊಡಬೇಕೆಂದೇ ನಿನಗೆ ಆಸೆ ಇದ್ದ ಪಕ್ಷದಲ್ಲಿ ಅನುಪನೀತನಾದ ಈ ನಮ್ಮ ಹುಡುಗನಿರುವನು, ಆತನ ಕೈಯಲ್ಲಿ ಕೊಡಬಹುದು. ಇಷ್ಟಾಗಿಯೂ ಈ ತುಲಸೀದಳಗಳಂ ನಿನ್ನಿಂದಲೇ ತೆಗದುಕೊಳ್ಳಬೇಕೆಂಬ ನಿರ್ಬಂಧ ನಮಗಿಲ್ಲವು. ಇದಕ್ಕಿಂತಲೂ ಹೆಚ್ಚಾಗಿಯೂ, ಚಿಗುರಾಗಿಯೂ, ಹೊಸದಾಗಿಯೂ, ಇರುವ ತುಲಸಿಗಳು ನಮಗೆ ಸುಲಭವಾಗಿ ದೊರೆಯುವದು. ಆದುದರಿಂ ನಿನ್ನ ತುಳಸಿಯು ನಿನ್ನ ಕೈಯಲ್ಲಿ ಇರಲಿ, ನೀನು ಬಂದಕಾರ್ಯವೇನು ಹೇಳು? ಮತ್ತು ನಾನು ಕರ್ಮನಿರತನಾಗಿರುವೆನು, ನನ್ನ

ಅನುಷ್ಠಾನಗಳಿಗೆ ವಿಘ್ನವಮಾಡದೆ, ನಿನ್ನ ಕಾರ್ಯವಿದ್ದರೆ ಶೀಘ್ರವಾಗಿಹೇಳೆಂದು ಬಹಳ ಡಬ್ಬುಧಾಳಿಕೆಯಿಂ ಹೇಳಲು ಹರಿರಾತರುಂ ಮನದೊಳುನಿರ್ವಿಣ್ಣರಾಗಿ ನಮಗೆನಿನ್ನಿಂ ದಾವಕೆಲಸವುಯಿಲ್ಲವು. ಮಾರ್ಗಾಯಾಸದಿಂದೀಬಾಲಕನು ಬಳಲಿಹೋದನು. ಈತನ ವಿಶ್ರಮಾರ್ಥವಾಗಿ ಬಂದೆವೆಂದುಹೇಳಲು, ಆ ಚತುರ್ವೇದಿಯು ಎಲೈಬ್ರಾಹ್ಮಣನೇ? ಪಿತೃಶ್ರಾದ್ಧವಂ ಪ್ರಾರಂಭಿಸಿರುವುದಂ ನೀನರಿಯೆಯಾ? ಆದುದರಿಂದೀತನಿಗೆ ಇಲ್ಲಿಅನ್ನ ವುದೊರೆಯಲಾರದು. ಮತ್ತೆಯಿಲ್ಲಿಯಾದರುಂ ಹೋಗಬಹುದು ಎಂದನು. ಅದಕ್ಕಾ ಬ್ರಾಹ್ಮಣೋತ್ತಮನು, ಎಲೈಚತುರ್ವೇದಿಯೇ? ನಿನ್ನಮನೆಯಲ್ಲಿ ಅನ್ನಾರ್ಥಿಗಳಾಗಿ ನಾವುಬಂದವರಲ್ಲ. ಬಹುದೂರನಡೆದುಬಂದು ಬಳಲಿಯಿರುವ ಬಾಲಕನಮಟ್ಟಿಗೆ ತಂಡು ಲಮಾಕೊಟ್ಟರೆ ಎಲ್ಲಿಯಾದರೂ ಹೋಗಿ ಪಾಕವಮಾಡಿ ಭಗವನ್ನಿವೇದನವಂಮಾಡಿಪ್ರಸಾ ದವಂಸ್ವೀಕರಿಸುವೆವು ಎಂದುಹೇಳಿದರು. ಅದಕ್ಕಾಚತುರ್ವೇದಿಯು ಗರ್ವದಿಂದಈಗ ನಿನಗೆ ಅಕ್ಕಿಯನ್ನುಕೊಡುವದಿಲ್ಲವೆಂದು ಹೇಳಲು ಆ ಬ್ರಾಹ್ಮಣನು, ಬಾಲಕನ ಬಳಲಿಕೆ ಯಿಂದ ಅತ್ಯಂತವಾಗಿ ದುಃಖಪಡುತ್ತಲಿರುವನಾಗಿ ಎಲೈಚತುರ್ವೇದಿಯೇ? ನೀನು, ಹೀಗಹೇಳುವದು ಉಚಿತವಲ್ಲವು. ಸಕಲಧರ್ಮವನ್ನೂ ನೀನೇಬಲ್ಲೆಯಲ್ಲವೇ? ಧರ್ಮ ಸೂಕ್ಷ್ಮಗಳನ್ನು ಚನ್ನಾಗಿಪರ್ಯಾಲೋಚಿಸಿ ನೀನುಕೊಡದಿದ್ದರುಂನಿನ್ನಬಂಧುಗಳಗೃಹ ದಲ್ಲಿಯಾದರೂ ಕೊಡಿಸಬಹುದು. ನಮಗೆ ನಿನ್ನಮನೆಯಲ್ಲಿಯೇ ಕೊಡಬೇಕೆಂಬಆಸ ಕ್ತಿಯಿಲ್ಲ ನಿನ್ನಪಿತೃಭಕ್ತಿಯೂ ವ್ರತನಿಯಮಗಳೂ ಹ್ಯಾಗಿರುವುದೋ? ಎಂದಮಾ ತಂಕೇಳಿ ಚತುರ್ವೇದಿಯು ಕೋಪಾಕ್ರಾಂತನಾಗಿ ಇದೇನು? ಈಬ್ರಾಹ್ಮಣನುಪಿಶಾ ಚದಂತೆ ಎಷ್ಟುಸಾರಿಹೇಳಿದಾಗ್ಯೂ ಹೋಗದೆಕಾಡುತ್ತಾನೆ ಅಂದುಕೊಂಡು ಎಲೈಬ್ರಾ ಹ್ಮಣನೇ? ಈ ಗ್ರಾಮದಲ್ಲಿ ಇದುಬಂದೇಮನೆ ಯಿರುವುದೋಯೇನು? ಅನೇಕಮನೆಗ ಳಿರುವವು ನೀನೇಹೋಗಿವಿಚಾರಿಸು. ನಡಿನಡಿ ಯಿಲ್ಲಿರಬೇಡವೆಂದು ಗದರಿಸಿದನು. ಆ ಗಲಾಹರಿರಾತರು ಬಹಳಖಿನ್ನರಾಗಿ ಆ ದುಷ್ಟಬ್ರಾಹ್ಮಣನಮನೆಯಂಬಿಟ್ಟು ಹೊರಗೆ ಹೋಗುವಾಗಕ್ಕಶಕ್ತಿಸಾಲದೆ ಬಿಸಿಲಬೇಗೆಗೆಬೆದರಿ ಬಳಲಿಕೆಯಿಂದ ಸ್ವಲ್ಪಕುಳಿತುವಿಶ್ರ ಮಿಸಿಕೊಂಡು ಹೋಗುವೆವೆಂದುಹೇಳಿ ಆತನಮನೆಯ ನಡಮೆಯಚಾಕದೊಳ್ ಕುಳಿತಿ ರ್ದರಂ. ಅದಂಕಂಡು ಆ ಚತುರ್ವೇದಿಯುಂ ಕೋಪದಿಂತನ್ನ ಮಕ್ಕಳಂಕರೆದು ಈ ಬ್ರಾಹ್ಮಣನಂ ಹೊರಗೆಕಳುಹಿ ಕದವಂಬಂಧಿಸೆನಲಾ ಧಾಂಡಿಗರುಬಂದು ಬ್ರಾಹ್ಮಣನಂ ಹೊರಡಿಸಿ ಬಿರ್ರನೆಕದವಂಹೊಚ್ಚುತಿರಲು ಆ ಕದವಿನವೇಗದಿಂ ಕಳವಳಿಸಿ ಹರಿರಾತನ ಬಾಲಕನೆಡವಿಬಿದ್ದು ನೀಂ ನಾಶವನೈದುವಿ ಯೆಂದಳುತಿರಲು ಹರಿರಾತನುಂ ಬೇಗದಿಂ ಬಾಲಕನಪಿಡಿದೆತ್ತಿಮೈದಡವುತ್ತ ಎಲೈಮಗನೇ? ಹಾಗನ್ನಬೇಡವೆಂದು ಸಮಾಧಾನಪ ಡಿಸಿ ನಮ್ಮಕರ್ಮವಶದಿಂ ಬರುವಸುಖದುಃಖಗಳಿಗೆ ನಾವು ಆಗ್ರಹಪಡಬಾರದುವಿಷ್ಣು ಭಕ್ತರಾದವರಂ ಕಾಮಕ್ರೋಧ ಲೋಭ ಮೋಹಾದಿಗಳು ಹೊದ್ದಲಾರವು. ದ್ವಿಪ

ಜ್ವಾಲೆಯುಂ ಕತ್ತಲೆಗಳು ಕವಿಯುಲಾರವು. ಎಂದು ಪೇಳುತಾತನಂ ಕರೆದುಕೊಂಡು ದುರ್ಜನರಂ ದೂರದೊಳ್ ಪರಿಹರಿಸಬೇಕೆಂದು ದೂರಕ್ಕೆ ಹೊರಟು ಹೋದರ್. ಆ ಸಮಯದೊಳ್ ಧರ್ಮದೇವತೆಯು ವಹ್ನಿಜ್ವಾಲೆಯು ಮಧ್ಯದೊಳಾದರೂ ಸರ್ಪದ ಹುತ್ತದ ಬಾಯೊಳಗಾದರೂ, ವಾಸಮಾಡಲಹುದು. ಭಗವದ್ಭಕ್ತರಂ ಪರಿಭವಿಸುವ ದುಷ್ಟರ ಸಮಿಪದೊಳಿರಕೂಡದೆಂದು ಯೋಚಿಸಿ ಆ ಅತಿಥಿಯೊಡನೆ ಹೊರಟು ಹೋಯಿತು. ಶ್ರಾದ್ಧದಿವಸದೊಳ್ ಪಿತೃಗಳಿಗೆಂದು ವಿಭಾಗಿಸಿ ಕಲ್ಪಿಸಿದ ವಸ್ತುವಂ ಅನ್ಯರಿಗೆ ಕೊಡಲಾಗದೆಂಬುದಲ್ಲದೆ ಆ ದಿವಸದೊಳು ಯಾವದೊಂದನ್ನುಂ ಅಭ್ಯಾಗತರಿಗೆ ಕೊಡಲಾಗದೆಂಬುದು ಧರ್ಮಸೂಕ್ಷ್ಮವನರಿಯದ ಮೂಢಾತ್ಮರ ದುರ್ನಡತೆಯಾದುದರಿಂದಾ ಚತುರ್ವೇದಿಗೆ ವಿದ್ಯಾಮಗದಿಂದಲುಂ, ಧನಮದದಿಂದಲುಂ, ರಾಜಮನ್ನಣಾಮೂಲಮಾದ ಅಹಂಕಾರದಿಂದಲುಂ, ಅದು ಯುಕ್ತಮಾಗಿರ್ದುದು. ಮತ್ತಮಾ ಚತುರ್ವೇದಿಯು ಬ್ರಾಹ್ಮಣಶ್ರೇಷ್ಠರಾದ ಅವರ ತೇಜೋಭಂಗವಂಮಾಡಿ ನಾಚಿಕೆಯುಂ ಪಶ್ಚಾತ್ತಾಪಮುಮಿಲ್ಲದೆ ಅನಿಷ್ಟಂ ತೊಲಗಿತೆಂದು ಸಂತೋಷದಿಂ ಮುಂದಣಶ್ರಾದ್ಧಕಾರ್ಯಂಗಳಂ ನಡೆಸುತಿರ್ದರ್. ಇತ್ತಲಾ ಹರಿರಾತರುಂ ಬಾಲಕನ ಒಳಾಕೆಯಿಂದ ಡಿಗಡಿಗೆ ಕೊರಗುತ್ತಲಾ ಗ್ರಾಮದಿಂ ದೂರದಲ್ಲಿ ಪೋಗುತಿರಲ್ ವಿಷ್ಣುರಾತನೆಂಬೋರ್ವಂ ಆತನಂ ನೋಡುತಿಂತೆಂದು. ಓ ವೃದ್ಧವೈಷ್ಣವರೆ ನೀವಾರು ? ಯಾವದೇಶದಿಂಬಂದಿರಿ ? ನಿಮ್ಮ ಫಣೆಯೊಳ್ ಶ್ವೇತಮೃತ್ತಿಕೆಯು ಊರ್ಧ್ವಪುಂಡ್ರಮುಂ ಬಾಹುಮೂಲದೊಳ್, ಶಂಖಚಕ್ರಲಾಂಛನಮುಂ ಕಂಠದೊಳ್ ತುಲಸೀಮಣಿಮಾಲೆ ಯೊಡಗೂಡಿದ ಕಮಲಾಕ್ಷಮಾಲೆಯುಂ, ವೈಷ್ಣವಾಗ್ರೇಸರರೆಂದು ಪೇಳುವುದು. ನಿಮ್ಮ ಈ ಬಾಲಕನುಂ ಸೊರಗಿದ ಮುಖಮು ಬೊಣಗಿದಬಾಯುಂ, ಸೋರುವ ಕಣ್ಣೀರುಂ ಕುಗ್ಗಿದಸ್ವರಮುಮಾಗಿ ಏಕೆ ಅಳುತಿರುವಂ ? ನೀವುಂ ತೇಜಂಗುಂದಿ ಮನನೊಂದಿರುವಂತೆ ಕಾಣುವಿರಿ ? ಎಂದು ಕೇಳಲಾ ಹರಿರಾತರುಂ ತಮ್ಮ ವೃತ್ತಾಂತವೆಲ್ಲವಂ ಪೇಳಿದರು. ಅದಂಕೇಳಿ ವಿಷ್ಣುರಾತನುಂ ಸಂತೋಷಮುಂ ಅನುತಾಪಮುಂ ತಳೆದು ಆದರದಿಂದೊಡಗೂಡಿದಮಧುರವಚನಗಳಿಂದಿಂತೆಂದಂ ಎಲೈಮಹಾನುಭಾವನೆ? ನಾನುಂಭಗವದ್ಭಕ್ತರ ದಾಸದಾಸರಿಗುಂ ದಾಸನೆನಿಸಿ ಅವರಪಾದಧೂಳಿಯಿಂ ಪಾವನಮಾದ ಶಿರಸ್ಸುಳ್ಳವನಾಗಿರುವೆಂ, ಎನ್ನಂ ವಿಷ್ಣುರಾತನೆಂದು ಕರೆಯುವರು. ಎನಗೆ ಹನ್ನೆರಡುಮಂದಿ ಪುತ್ರರಿರುವರ್. ವಿಷ್ಣುವಿನ ಕೇಶವಾದಿ ದ್ವಾದಶನಾಮಮೇ ಅವರಿಗೆ ಪೆಸರಾಗಿರುವುದು. ಎನ್ನ ಪತ್ನಿಯುಂ ನಾಂ ಮಾಡುವ ಧರ್ಮಗಳ ನನುವರ್ತಿಸುತಿರುವಳ್ ನಾನುಂ ಪ್ರಾಣಾಂತಮಾದ ಮಹದಾಪತ್ತುಗಳೊಳುಂ ನಾರಾಯಣನಂ ಬಿಟ್ಟು ದೇವತಾಂತರಮುಂ ಮಣಿವನಲ್ಲಂ ಶಿಷ್ಟರ ಗೃಹದೊಳ್ ಮುಷ್ಟಿಯ ನೆರೆದು ಅದರಿಂ ಭಗವದಾರಾಧನವಂ ಮಾಡಿ ತತ್ಪ್ರಸಾದದಿಂ ದೇಹಧಾರಣವಂ ಮಾಡುತಿರುವೆಂ ಸಾಕ್ಷಾದ್ವಿಷ್ಣುಸ್ವರೂಪಿಯಾದ ನೀವೆನ್ನ ಗೃಹವಂ ತುಳಿದು ಪಾವನವಾಗಿ ಮಾಡಬೇಕೆಂದು ಪ್ರಾರ್ಥಿಸಲು

ಹರಿರಾತನುಂ ಹರುಷಮನೆಯ್ದಿ ಹಾಲೊಳ್ ಶರ್ಕರೆ ಸೇರುವಂತೆ ಆತನೊಳ್ ಕಲೆತು ಆತನ ಮನೆಯಂ ಪ್ರವೇಶಿಸಿದಂ ಆಗಲಾತನ ಗೃಹಿಣಿಯಾದ ಸುಮುಖಿಯುಂ ವಿಕಸಿತಮುಖಿಯಾಗಿ ಶುಚಿರ್ಭೂತೆಯಾಗಿ ಪಾತ್ರಂಗಳಂ ಬೆಳಗಿ ಪಾಕಮಂ ಮಾಡುತಿರಲ್, ವಿಷ್ಣುರಾತನುಂ ಮಾಧ್ಯಾಹ್ನಿಕಸ್ನಾನಾದಿಗಳಂ ಮಾಡಿ, ಭಗವದಾರಾಧನೆಗೆಯ್ದು ಪಾವನವಾದ ಆ ಪಕ್ವಾನ್ನಮಂ ಭಗವಂತನಿಗೆ ನಿವೇದನಮಂ ಮಾಡುತಿರ್ದಂ. ಆ ಸಮಯದೊಳೋರ್ವಂ ಯತೀಶ್ವರಂ ನಾಲ್ವರ ಶಿಷ್ಯರೊಡಗೂಡಿ ವಿಷ್ಣುರಾತನ ಗೃಹಮಂ ಪ್ರವೇಶಿಸಿದಂ ಆಗಲಾ ವಿಷ್ಣುರಾತನುಂ ಅತಿಥಿಯಾದ ಹರಿರಾತನುಂ ಪರಮಸಂಭ್ರಮದಿಂದೆದ್ದು ಬಂದು ಪರಮಭಾಗ್ಯಮಾದುದು ಅತಿಧನ್ಯರಾದೆವೆಂದು ಆ ಮುನೀಶ್ವರನ ಪಾದಂಗಳೊಳ್ ತಲೆಯಂ ಚಾಚಿ ಸಾಷ್ಟಾಂಗವೆರಗಿ ಕೈಮುಗಿದು ಗೃಹಾಭ್ಯಂತರದೊಳ್ ದಾರುಮಯವಾದ ಆಸನವನಿತ್ತು, ಶೀತಳಮಾದ ತೀರ್ಥದಿಂದವರ ಪಾದಂಗಳಂ ತೊಳೆದು ಆ ತೀರ್ಥಮಂ ಸ್ವೀಕರಿಸಿದರು. ಅನಂತರದಲ್ಲಿ ಆ ಮುನಿಶ್ರೇಷ್ಠರುಂ ಅವರ ನಾಲ್ವರ್ ಶಿಷ್ಯರುಂ ಹರಿರಾತರುಂ ಅವರ ಪುತ್ರನುಮಾಗಿ ಈ ಏಳುಮಂದಿಯುಂ ಸಹಪಙ್ಕ್ತಿ ಭೋಜನಂಗೆಯ್ದು ತೃಪ್ತರಾಗಿ ಸಂತೋಷದಿಂ ಆಸನದಲ್ಲಿ ಕುಳ್ಳಿರಲು ವಿಷ್ಣುರಾತನ ಬಾಲಕನೋರ್ವಂ ಕ್ಷುದ್ಬಾಧೆಯಂ ತಡೆಯಲಾರದೆ, ತಂದೆಯ ಸಮೀಪದೊಳ್ ನಿಂದಳುತಿರ್ದಂ ಆಗಲಾ ವಿಷ್ಣುರಾತನುಂ ತನ್ನ ಗೃಹಿಣಿಯಂ ನೋಡಿ ನಿನ್ನ ಮಗನಳುತಿರುವಂ. ಪಾತ್ರದೊಳ್ ಶೇಷವಾದ ಪ್ರಸಾದವಿದ್ದರೆ ಈತಂಗಿತ್ತು ಸಮಾಧಾನಪಡಿಸೆನಲು ಆ ಸುಮುಖಿಯುಂ ಪಾಕಶಾಲೆಯಂ ಪೊಕ್ಕು ಪಾತ್ರಗಳಂ ನೋಡಿ ಯಾವ ಪಾತ್ರದೊಳಂ ಸ್ವಲ್ಪಮಂ ಪ್ರಸಾದವಿಲ್ಲೆಂದು ಪೇಳಿ ಸುಮ್ಮನಿರಲ್ ಬ್ರಾಹ್ಮಣನುಂ ಬಾಲಕನ ಬಾಧೆಯಂ ತಡೆಯಲಾರದೆ ಮತ್ತೊಂದಾವೃತ್ತಿ ಯೆಲ್ಲಾ ಪಾತ್ರಗಳಂ ಚೆನ್ನಾಗಿ ನೋಡೆಂದು ಪೇಳಲ್, ಪತಿವಾಕ್ಯಕೆ ಪ್ರತಿವಾಕ್ಯಮಿಲ್ಲವೆಂದು ಪುನಃ ಪಾತ್ರಗಳಂ ನೋಡುವಾಗ ಸಕಲಪಾತ್ರಂಗಳೊಳುಂ ತಾಂ ಪಾಕವ ಮಾಡಿದಂತೆ ಪದಾರ್ಥಂಗಳ್ ತುಂಬಿರುವುದಂ ನೋಡಿ ವಿಸ್ಮಯಾಕ್ರಾಂತೆಯಾಗಿ ಪತಿಯಂ ಕರೆದು ತೋರಿ ಆ ಮೃಷ್ಟಾನ್ನಮಂ ಪತಿಗುಂ ಪುತ್ರರಿಗುಂ ಬಡಿಸಿ ತಾನುಮುಂಡು ಸಂತೋಷಿಸಿದಳ್. ಅದು ಮೊದಲಾಗಿ ಆ ಸುಮುಖಿಯುಂ ಯಾವ ಯಾವ ಪಾತ್ರದೊಳ್ ಯಾವ ಯಾವ ಪದಾರ್ಥಮನಪೇಕ್ಷಿಸುವಳೋ ಆ ಪಾತ್ರಂಗಳೊಳಾ ವಸ್ತುಗಳ್ ದ್ರೌಪತಿಗೆ ಸೂರ್ಯನಿತ್ತ ಅಕ್ಷಯಪಾತ್ರದಂತೆ ತುಂಬುತಿರಲ್ ಆ ದಂಪತಿಗಳ್ ನಿರಾಯಾಸವಾಗಿ ದಿನದಿನದೊಳ್ ಅಸಂಖ್ಯಾತರಾಗಿ ಅಭ್ಯಾಗತರನಾರಾಧಿಸುತಿರ್ದರ್. ಮತ್ತಮಾ ಸಂಯಮೀಂದ್ರಂ ಭೋಜನಂಗೆಯ್ದ ನೆಲದೊಳ್ ಅಪಾರಮಾದ ನಿಧಿಯುಂ ವಿಷ್ಣುರಾತಂಗೆ ಲಭಿಸಿತು. ಸನ್ಯಾಸಿವೇಷದಿಂ ಸಾಕ್ಷಾನ್ನಾರಾಯಣನೇ ವೇದಪುರುಷರೊಡಗೂಡಿ ವಿಷ್ಣುರಾತನ ಮನೆಯನೆಯ್ದಿದಂ. ಈತನೇ ದತ್ತಾತ್ರೇಯ ಮುನೀಂದ್ರನೆಂದೆನಿಪುದು. ಆದುದರಿಂದಲೈ ಋಷಿಗಳೇ ? ಆವನ ಗೃಹದಲ್ಲಿ ವಿಷ್ಣುಭಕ್ತರು ಆರಾಧಿಸಲ್ಪಡುವರೋ ಆತನ ಗೃಹದೊಳ್ ನಾರಾಯಣನೇ ರೂಪಾಂತರದಿಂ ಭುಜಿಸಿ ಸಕಲಸಂಪತ್ಸ

ವೃದ್ಧಿಗಳನೀವ. ಅತ್ತಲಾ ಚತುರ್ವೇದಿಯುಂ ಹರಿರಾತನಂ ಹೊರಗೆ ತಳ್ಳಿಸಿ ಸಂತೋಷದಿಂ ಶ್ರಾದ್ಧಕಾರ್ಯಂಗಳಂ ಮಾಡುತ್ತಿರಲು ಆತನ ಗೃಹದೊಳ್ ಪಾಲ್ಗೊಡದೊಳೊಂದು ಹಾವು ಹಾಲುಣಲ್ ಬಂದು ಅದರೊಳ್ ತನ್ನ ವಿಷಮಂ ಕಾರಿಪೋದುದು. ಆ ವಿಷಮಿಶ್ರಪಯಃಪಾನದಿಂ ನಿಮಂತ್ರಿತರಾದ ಬ್ರಾಹ್ಮಣರೆಲ್ಲರುಂ ಭೋಜನೋತ್ತರಕ್ಷಣದೊಳ್ ಮೃತಿಯನೈದಿರಲ್, ಚತುರ್ವೇದಿಯುಂ ಭೋಜನಪದಾರ್ಥಂ ವಿಷಮಿಶ್ರಮೆಂದರಿದು, ಆ ಪಿತೃಶೇಷವಂ ಬಿಟ್ಟು ಬೇರೆ ಪಾಕವಂ ಮಾಡಿಸಿ ತಾನುಂ ತನ್ನ ಮಕ್ಕಳುಂ ಮತ್ತುಮಿಷ್ಟಜನಂಗಳುಮುಂಡು ಸುಖವಾಗಿರ್ದರು. ಇದಂ ತಿಳಿದು ನಿಮಂತ್ರಿತಬ್ರಾಹ್ಮಣರ ಪುತ್ರಪೌತ್ರಾದಿಗಳತ್ಯಂತದುಃಖದಿಂ ಚತುರ್ವೇದಿಯು ನಿಮಂತ್ರಣವ್ಯಾಜದಿಂ ನಮ್ಮ ಪಿತ್ರಾದಿಗಳಿಗೆ ವಿಷಮಿಕ್ಕಿ ಕೊಂದನೆಂದು ರಾಜಸನ್ನಿಧಾನದೊಳ್ ಮೊರೆಯಿಟ್ಟುಕೊಳುತಿರಲ್, ರಾಜಾಜ್ಞೆಯಿಂ ಶಿಕ್ಷಾಧಿಕಾರಿಗಳ್ ಘೋರವಾದ ಈ ಅಪರಾಧದಿಂ ರೋಷಾಕ್ರಾಂತರಾಗಿ ಮರಣಾಂತ ದಂಡನೆಯಂ ವಿಧಿಸಲು, ಕ್ರೂರರಾದ ರಾಜಭಟರಿಂ ಮರ್ಮಸ್ಥಾನಗಳೊಳ್, ಪ್ರಹರಿಸಲ್ಪಟ್ಟು ಪ್ರಾಣಮಂ ತೊರೆದಂ. ಈ ರಾಜದಂಡನೆಯಿಂ ಭಯಪಟ್ಟು, ಆತನ ಮಕ್ಕಳ್ ನಾಲ್ವರುಂ ಭಯಂಕರವಾದರಣ್ಯಕೆ ಪೋಗಿ ವ್ಯಾಘ್ರಾದಿಗಳಿಂ ಭಕ್ಷಿತರಾದರ್. ದುರ್ಮುಖಿಯೆಂಬಾತನ ಹೆಂಡತಿಯುಂ ಪತಿಪುತ್ರಮೃತಿಯಿಂದತಿದುಃಖಿತೆಯಾಗಿ ಕಂಠದೊಳ್ ನೇಣಂ ಬಿಗಿದು ಗೃಹಾಂತರದೊಳುದ್ಬಂಧನದಿಂದಸುವಂ ತೊರೆದಳ್. ಉಳಿದಿರ್ದರಡು ಕನ್ನಿಕೆಗಳುಂ ಅಶರಣವಾಗಿ ಭಯದಿಂ ಮನೆಯ ಕಿಟ್ಟಿಗೆಯೊಳಗ್ನಿಯಂ ಬೆಳಸಿ ಅದರೊಳ್ ಬೀಳಲು ಆ ಕಿಚ್ಚಿನಿಂದಾ ಊರೆಲ್ಲಮುಂ ಬೆಂದು ಬೂದಿಯಾದುದು. ವಿಷ್ಣುರಾತನ ಗೃಹಂ ವಿವಿಕ್ತವಾಗಿದ್ದುದರಿಂದಲುಂ, ಭಾಗವತಾಭಿಮಾನಕೆ ಆಕರವಾಗಿರ್ದುದರಿಂದಲುಂ, ಉರಿಯದುಮದುಂ ಉಳಿದುದು. ಮತ್ತಂ ಚತುರ್ವೇದಿಯ ಸಂಬಂಧಿಗಳಂ ರಾಜಪುರುಷರು ಕಾರಾಗೃಹದೊಳಿರಿಸಲವರು ಅಲ್ಲಿಯೇ ಮೃತರಾದರು. ಹರಿಭಕ್ತರತಿರಸ್ಕಾರಂ ಅತಿಕ್ರೂರಮಾದುದರಿಂ ಮೂರು ದಿವಸದೊಳ್ ಆ ಚತುರ್ವೇದಿಗುಂ ತತ್ಸಂಬಂಧಿಗಳಿಗುಂ ಈ ಅನರ್ಥಂಗಳುಂಟಾದವು, ಇದಲ್ಲದೆಯುಮಾತಂಗೆ ಲೋಕಾಂತರದೊಳಾದ ಅನರ್ಥಂಗಳತಿಭಯಂಕರವಾಗಿರ್ದುದು. ಈ ಚತುರ್ವೇದಿಯನುಂ ಈತನ ಪತ್ನೀಪುತ್ರಾದಿಗಳನುಂ, ಮರಣಾನಂತರದಲ್ಲಿ ಕ್ರೂರರಾದ ಯಮಭಟರು, ಯಾತನಾಶರೀರಮಂ ನಿತ್ತು ಕಾಲಿನ ಹೆಬ್ಬೆಟ್ಟಿನೊಳ್ ಮಿಣಿಯ ಪಗ್ಗದಿಂ ಕಟ್ಟಿ ಕಲ್ಲುಗಳಿಂದಲುಂ, ಮುಳ್ಳುಗಳಿಂದಲುಂ ಕಾದ ಮರಳುಗಳಿಂದಲುಂ ನಾನಾವಿಧಶಸ್ತ್ರಗಳಿಂದಲುಂ ಸಂಕಟಕರವಾದ ಧೂಮಯಾನಮಾರ್ಗದೊಳಧೋಮುಖಮಾಗಿ ಎಳೆಯುತಿರಲ್, ಚತುರ್ವೇದಿಯುಂ ದೂರದೊಳ್ ಯಮನಂ ಕಂಡು ಓ ಧರ್ಮರಾಯನೇ! ಸರ್ವರೊಳ್ ಸಮದೃಷ್ಟಿಯಿಟ್ಟು ಅಪರಾಧಿಗಳಂ ಶಿಕ್ಷಿಸುವ ನಿನ್ನಿದಿರೊಳು ನಿರಪರಾಧಿಯಾದೆನ್ನಂ ನಿನ್ನ ಭಟರು ಯಾತನೆಪಡಿಸುವುದು ಅನ್ಯಾಯಮು. ಈ ಅನ್ಯಾಯಮಂ ನೀಂ ನೋಡಿ ಸುಮ್ಮನಿರುವುದೇನೆಂದು,

ದೀನಾಕ್ರಂದದಿಂಕೂಗಿಡಲಾ ವೈವಸ್ವತನುಂ, ಸಮೀಪಕೆಬಂದು ಓ ಬ್ರಾಹ್ಮಣನೇ? ಆನ್ಯಾಯಮೊಂದು ಬಹಳಕೂಗುವಿ ಅದೇನನ್ಯಾಯವು ಅದಂನನ್ನಮುಂದೆ ನಿಜವಾಗಿಪೇಳೆಂದೊಡಾತನಿಂತೆಂದಂ. ಎಲೈನ್ಯಾಯಿಯೇ? ನಾಂ ನಾಲ್ಕುವೇದಂಗಳನೋದಿ ಅದರರ್ಥಗಳಂತಿಳಿದು ಮೀಮಾಂಸಾಶಾಸ್ತ್ರಂಗಳಂತಿಳಿದು ಶ್ರೌತಸ್ಮಾರ್ತ ಕರ್ಮಂಗಳಂಅನುಷ್ಠಿಸಿದೆಂ. ಈ ನನ್ನಮಕ್ಕಳುಂ ನನ್ನಿಂದತಿಶಯವಾಗಿ ಶಾಸ್ತ್ರಾನುಷ್ಠಾನಮಂ ಮಾಡಿರುವರ್. ಮತ್ತಂ ಅಸಂಖ್ಯಾತವಾಗಿ ಯಜ್ಞಂಗಳಂ, ಅತಿಥಿಪೂಜೆಗಳಂಮಾಡಿದೆನ್ನಂ ನಾನಾವಿಧನರಕಂಪಾತನೆಗೆ ಎಳತರುವುದು ಅನ್ಯಾಯಮಲ್ಲವೆ? ನೀನಾಲೋಚಿಸಿ ಚಿತ್ತಮೊಪ್ಪಿದಂತೆ ನಡೆಸಲಹುದು. ಪರತಂತ್ರರಾದನಾವು ಯೇನ್ನೇನುಪೇಳ್ವುದೆನಲು ಆ ಧರ್ಮರಾಜನಿಂತೆಂದಂ. ಎಲೈಬ್ರಾಹ್ಮಣನೇ? ನೀಂ ನಿಜಮಂನುಡಿಯುವಿ, ಆದೊಡೆ ನಿನ್ನದೋಷಮಂನೀನರಿಯೆ ಅದಂತಿಳುಪುವೆನವಧರಿಸು. ನಾರಾಯಣನ ಭಕ್ತನಾಗಿ, ಜಿತೇಂದ್ರಿಯನಾಗಿ, ನಾರಾಯಣಾದ್ರಿಯಿಂ ಬಳಲಿಬಂದವರಂ ನೀಂ ಅವಮಾನಪಡಿಸಿದುದನರಿಯೆಯಾ? ಲಕ್ಷ್ಮೀವಲ್ಲಭನ ಪದಾರವಿಂದದೊಳ್ ಅರ್ಚಿತವಾದತುಲಸಿಯಂ ತಿರಸ್ಕರಿಸಿದ ನಿನ್ನಂತೆಪಾಪಿಗಳೆಲ್ಲಿಯಾದರುಮಿರುವರೆ? ಬುದ್ಧಿಹೀನನೇಕೇಳು, ಆ ಬ್ರಾಹ್ಮಣೋತ್ತಮಂ ಬಳಲಿದಬಾಲಕನಂತೋರಿ ದೈನ್ಯದಿಂಯಾಚಿಸಿದರೆ ಸಾಕ್ಷಾನ್ನಾರಾಯಣನೆಂದುಭಾವಿಸದೆ ಅವರಂಪಿಶಾಚಿಯೆಂದು ನೀಂ ಬಗುಳಲಿಲ್ಲವೆ? ನಾರಾಯಣಗಿರಿಯೊಳ್ ವಾಸದಿಂ ಸಕಲದೇವತೆಗಳಿಗುಂ ನನಗುಂ ವಂದನೀಯರಾದ ಆ ಹರಿದಾಸರ ವಾಕ್ಯಂಗಳೆಲ್ಲಮಂಧಿಕ್ಕರಿಸಿದುದಂ ನೀಂ ಮರತಿರುವಿಯೋ? ಎಲೈಕುತ್ಸಿತಬುದ್ಧಿಯುಳ್ಳನೀಚನೇ ಕಸಮಂತೊಡೆಯದೆ ಕಶ್ಮಲವಾದನಿನ್ನಂಗಣದಲ್ಲಿ ಅವರು ವಿಶ್ರಮಿಸಿಕೊಳ್ಳುವುದಂಸಹಿಸದೆ ದುರಾತ್ಮರಾದಮಕ್ಕಳಿಂದ ಆತನಂಹೊರಡಿಸಿ ಕದವಂಮುಚ್ಚಿದುದಂ ಅದರಿಂಬೆದರಿ ಬಿದ್ದುಘಾಯಮಡೆದ ಆ ಬಾಲಕನ ಕಷ್ಟದೆಶೆಯಂ ಈಗನೀಂಸ್ಮರಿಸುವಿಯೋ ? ಆತನಂಹೊರಡಿಸಿ, ನಿರ್ಘೃಣನಾಗಿ ಈ ನಿನ್ನಬಂಧುಗಳೊಡನೆ ಪರಿಹಾಸಗಳಂನುಡಿಯಲಿಲ್ಲವೆ? ಇದುಮಲ್ಲದೆ ಬಾರಿಬಾರಿಗುಂ ನೀಂ ರಾಜಸಮಾಜದೊಳ್ ವೈಷ್ಣವರಂದೂಷಿಸಿ, ನಾಸ್ತಿಕರಂಪುರಸ್ಕರಿಸಿ ವೇದಪ್ರಮಾಣಂಗಳಿಂ ವಿಷ್ಣುಪಾರಮ್ಯಮುಂಟಾಗಲ್ ಅಸೂಯಪಡುತ್ತಂ ಭಗವಚ್ಛರಣಾಗತಿಯಂ ತಿರಸ್ಕರಿಸುವುದೇಮೊದಲಾದ ಅನೇಕಪಾಪಂಗಳಂಮಾಡಿ ಈಗಅನ್ಯಾಯವೆಂದು ಕೂಗುವುದೇನೆನಲು, ಚತುರ್ವೇದಿಯುಂ ದುಃಖದಿಂತಲೆಬಾಗಿನಿಂದು ಮಹಾರಾಜನೇ ಮೂಢಾತ್ಮನಾದನಾಂ ಈ ಅಕೃತ್ಯವೆಲ್ಲಮಂಮಾಡಿರುವೆಂ. ಇದುನಿಶ್ಚಯವಾಗಿರುವುದು. ಈ ಮಹಾಪಾತಕಂಗಳಿಂದೆನಗೆ, ಬಿಡುಗಡೆಯಾಗುವುದಕೇನುಪಾಯವೋ ಅದಂ ದಯಾಳುವಾದನೀನೆನಗರುಹಬೇಕೆಂದುಧರ್ಮರಾಜನ ಚರಣಕೆರಗಿ. ಅತಿಭಯದಿಂನಡುಗುತಿರ್ದಂ. ಆಗಲಾದಂಡಧರಂ ಎಲೈಬ್ರಾಹ್ಮಣನೇ? ನಾಂ ಸಕಲಪಾಪಂಗಳಿಗುಂ ತಕ್ಕಶಿಕ್ಷಾಕ್ರಮಂಗಳನರಿತು ನಾನಾನರಕ

ಯಾತನೆಗಳಿಂ ಪಾಪಂಗಳಂ ಕಡೆಹೋಗಿಸುವೆಂ. ಭಾಗವತಾಪರಾಧರೂಪವಾದ, ಮಹಾಪಾತಕವಿನ್ನೊಳಿರ್ಪುವೆಲ್ಲಾ ನರಕಂಗಳಿಂದಲುಂ ತೀರ್ಚಲಾಗದೆನಲ್ ಚತುರ್ವೇದಿಯುಂ ನಿರ್ವಿಣ್ಣನಾಗಿ ಅವನಕಾಲಂಪಿಡಿದು ನಿನ್ನಂಶರಣಮೈಯ್ದಿದೆಂ. ಶರಣಾಗತಿಧರ್ಮಮನರಿತಿರುವ ನೀನೆನ್ನಸಲಹಬೇಕೆಂದುಪೇಳಿದಂ. ಅನಂತರದೊಳ್ ವೈವಸ್ವತನುಂ ಮನಮರುಗಿ ಎಲೈಬ್ರಾಹ್ಮಣನೆ! ನಿನ್ನಮರಣಕಾಲದೊಳ್ ಹರಿರಾತ್ರಿವಾರ್ತೆಯಂಕೇಳಿ ನಿನ್ನೊಳ್ ದಯೆಗೊಂಡು ಏಳುಆವರ್ತಿ ಗೋವಿಂದನಾಮಮಂ ಅನುಸಂಧಿಸಿದರ್. ಆದುದರಿಂದವರ ಕೃಪೆಯಿಂ ನಿನಗೆ ಕ್ರೂರಮಾದ ಕುಂಭೀಪಾಕಾದಿನರಕಯಾತನೆಗಳ್ ತಪ್ಪಿರುವುದು. ನಿನ್ನಘೋರಕೃತ್ಯದಿಂದ ನೀಂ ಬ್ರಹ್ಮರಾಕ್ಷಸನಾಗಿ ನೆರಳಂ ನೀರುಮಿಲ್ಲದೆ ದುರ್ಗಮಮಾದ ಅರಣ್ಯದೊಳ್ ವಾಸಮಾಡುವಿ. ನಿನ್ನಪತ್ನಿಯಾದದುರ್ಮುಖಿಯುಂ ನಿನ್ನಮಕ್ಕಳುಂ ಆ ಜನ್ಮದೊಳ್ನಿನಗೆ ಹೆಂಡತಿಯಾಗಿಯುಂ ಮಕ್ಕಳಾಗಿಯುಂ ಬ್ರಹ್ಮರಾಕ್ಷಸರಾಗುವರು. ನಿನ್ನಗೃಹದೊಳ್ ಭೋಜನವಂಮಾಡಿದಬ್ರಾಹ್ಮಣರುಂ ಹದ್ದುಗಳಜನ್ಮದೊಳಿದ್ದು ನಿನ್ನಿಂದಸಂಹೃತಮಾದ ಸತ್ವಗಳ ಮಾಂಸಖಂಡಗಳಿಂಜೀವಿಸುವುದು ಎಂದುಪೇಳಿ ಸುಮ್ಮನಾಗಲಿಕ್ಕಾಗಿ, ಚತುರ್ವೇದಿಯಿಂತೆಂದನು. ಎಲೈಧರ್ಮರಾಜನೇ! ಯಿಂಥಾಪಾಪಜನ್ಮದಲ್ಲಿ ನಾನೆಂತಿರುವೆನು. ಎನಗೀಜನ್ಮದಿಂ ವಿಮೋಚನಂ ಯಾವರೀತಿಯಿಂದಾಗುವುದು ದಯಾನಿಧಿಯಾದ ನೀನಿದನರುಹಬೇಕೆಂದುಬೇಡಿಕೊಂಡನು. ಅದಕಾಯಮನುಂ, ಎಲೈಮಹಾಪಾಪಿಯೆ! ನಿನಗೆ ವಿಷ್ಣುಭಕ್ತರದರ್ಶನಂದೊರೆತಾಗ ಈ ಜನ್ಮಂ ತೀರುವುದೆಂದು ಪೇಳಿಕಳುಹಿದನು. ಆಗಲಾ ಚತುರ್ವೇದಿಯುಂ ಸಪರಿವಾರನಾಗಿ ಯಮಕಿಂಕರರಿಂದ ಬಿಡಲ್ಪಟ್ಟವನಾಗಿ ಬ್ರಹ್ಮರಾಕ್ಷಸರೂಪಿನಿಂ ವಿಂಧ್ಯಾರಣ್ಯಮಂ ಪ್ರವೇಶಿಸಿದನು. ಅವನ ಸಂಬಂಧಿಗಳುಂ ಹದ್ದುಗಳ ಜನ್ಮಮಂತಾಳಿ ಆ ಅರಣ್ಯಮಂ ಸೇರಿದವು. ಈ ಹರಿರಾತ್ರೋಪಾಖ್ಯಾನವಂ ಯಾರುಭಕ್ತಿಯಿಂ ಕೇಳುವರೋ ಯಾರು ಪಠನಮಾಡುವರೋ ಅವರು ಸಕಲ ಪಾಪಗಳಿಂ ಬಿಡಲ್ಪಟ್ಟವರಾಗಿ ನಿರ್ಹೇತುಕ ಭಗವತ್ಕಟಾಕ್ಷಕ್ಕೆ ಪಾತ್ರರಾಗುವರು. ಅವರಿಗೆ ಧನಧಾನ್ಯಸಮೃದ್ಧಿಗಳುಂಟಾಗಿ ಅನೇಕವಾದ ಅನ್ನದಾನಮಂ ಮಾಡುವರು ಅವರ ವಿರೋಧಿಗಳುಂ ನಾಶಮೊಂದುವರು ಎಂದು ನಾರದರ ವಾಕ್ಯಮಂಕೇಳಿ ಋಷಿಗಳೆಲ್ಲರುಂ ಆಶ್ಚರ್ಯಪಡುತಿದ್ದರು.



ಶ್ರೀಃ

## ಎಂಟನೆಯ ಅಧ್ಯಾಯವು

ಕಂ॥ ಹರಿನಾಮಮುದಕ್ಕರಂಮಿಗೆ । ಹರಿಭಕ್ತರಪಾದ ಧೂಳಿತತ್ತೀ
ರ್ಥದತುಂ ॥ ತುರಗಿಗೊಂದೊಂದುರೆಸಾಲದೆ ದುರಂತದುರಿತೌಘ
ಕೋಟಿ ವಿಧ್ವಂಸನಕಂ ॥

ಅನಂತರಪಲ್ಲಿ ಋಷಿಗಳುಂ ಎಲೈ ನಾರದರೆ ಆ ಬ್ರಹ್ಮರಾಕ್ಷಸ ರೂಪನಾದ ಬ್ರಾಹ್ಮಣನಿಗೆ ಆಜನ್ಮಂ ತೀರಿ ಸದ್ಗತಿಯುಂಟಾದ ವೃತ್ತಾಂತವಂ ಪೇಳೆನಲ್ ನಾರದನಿಂತೆಂದನು. ಎಲೈ ಋಷಿಗಳಿರಾ ಆ ಬ್ರಹ್ಮರಾಕ್ಷಸಂ ನಿರ್ಜಲವಾಗಿ ಫಲಮೂಲಗಳುಂ ದೊರೆಯದೆ ಕಲ್ಲುಗಳಿಂದಲುಂ, ಮುಳ್ಳುಗಳಿಂದಲುಂ, ಕಾಡ್ಕಿಚ್ಚುಕೆತಂಗಳಿಂದಲುಂ, ಸಿಂಹ ವ್ಯಾಘ್ರಾದಿಗಳಿಂದಲುಂ, ಭಯಂಕರವಾದರಣ್ಯದಲ್ಲಿದ್ದು ಹಸಿವು ದಾಹತಾಪ ಮೋಹಗಳಿಂ ಪೀಡಿತನಾಗಿ ಸಮಸ್ತ ಪ್ರಾಣಿಗಳಿಗು ಅತಿಭಯಂಕರವಾಗಿರುವಂತೆ ಮೈಯೊಳಗೆಲ್ಲೆಲ್ಲಿಯುಂ ನರವುಗಳುಂ ಅಗ್ನಿಜ್ವಾಲೆಯೋಪಾದಿಯಲ್ಲಿ ಕೆಂಜಡೆಗಳಂ ಕೆದರಿ ಕಾಡ್ಗಿಚ್ಚಿನಿಂ ಬೆಂದ ಬೆಟ್ಟದಂತೆ ಕಪ್ಪಾದರೂಪವಂ ಬತ್ತಿದ ದಾಡೆಗಳುಂ ಹಾವಿನಂತೆ ತಲೆದೋರುವ ನಾಲಿಗೆಯುಂ ಪಾತಾಳದ ಗುಹೆಯಂತೆ ತೆರೆದಬಾಯುಂ, ಕ್ರೂರವಾದ ಕೋರೆಯುಂ ನೀಳ್ದಪಲ್ಗಳುಂ, ಜೋಲುವ ತುಟಿಯುಂ ಹಾಳದೊಳಿರುವ ಕಣ್ಗಳುಂ ಸೊಟ್ಟೆಯಾದ ಮೂಗುಂ ಮೊರದಂತಿರುವ ಕಿವಿಗಳುಂ ತಿಟ್ಟುಂ ಪಳ್ಳಮುಮಾದ ಮೊಗಮುಂ ಅಡ್ಡಲಾದನೋಟಮುಂ ತಾಳಪ್ರಮಾಣಮಾದ ಕೈಕಾಲುಗಳುಂ ಲಂಬೋದರಮುಮಾಗಿ ಶವಕರ್ಪಟದ ಹೊದಿಕೆಯು ಎಲುಬಿನಮಾಲೆಯುಂ ನರವಿನಉಪವೀತ ಕಟಿಸೂತ್ರಗಳಂ ಧರಿಸಿ, ಶೂಲ ಖಡ್ಗ ಪಾಣಿಯಾಗಿ ಪಾಪಿಗಳದೃಷ್ಟಿಗೆ, ಗೋಚರನಾಗಿ ಭಯಂಕರವಾದ ಧ್ವನಿಯಿಂದೊಡಗೂಡಿ ಪ್ರಾಣಿಗಳಂ ಕೊಂದುಕೊಂದು ತಿಂದು ತಿಂದು ಕಡೆಬಾಯೊಳ್ ಕಟ್ಟಿದ ಮಾಂಸ ಪಿಂಡಮುಮೈದೆಸೊಳ್ ಪರಿದೋಣಗಿದ ರಕ್ತಧಾರೆಯುಮಾಗಿ ಸರ್ವ ಸುಖಂಗಳುಮಿಲ್ಲದೆ ಅಮಂಗಳನಾಗಿ ನರಿಗಳಿಂದಲುಂ ಮಾಂಸವಾಸೆಯಿಂ ಸುತ್ತಲ್ಪಟ್ಟವನಾಗಿ ಈ ತೆರದೊಳ್ ಐದುಸಾವಿರ ವರ್ಷದವರೆಗುಂ ತನ್ನ ಪತ್ನೀಪುತ್ರಾದಿಗಳೊಡನೆ ಕ್ಲೇಶದೊಳಿರುತಿರ್ದಂ ಇವನ ಸಂಬಂಧಿಗಳುಂ ಗೃಧ್ರರೂಪದೊಳ್ ಈತಂಕೊಂದು ತಿಂದು ಚೆಲ್ಲುವ ರಕ್ತಮಾಂಸ ಶಕಲಗಳಿಂದುದರವಂ ಪೊರೆಯುತಿವನೊಡನೆ ಇರುತಿರ್ದರು. ಎಲೈ ಋಷಿಗಳಿರಾ ಬ್ರಹ್ಮದ್ವೇಷದೋಷಕಿಷ್ಟಾದರುಂ ಸಾಲದು ಅವರಿಗೆ ಕಲ್ಪಾಂತ ಪರ್ಯಂತ ನರಕಾನುಭವಂ ಸಲ್ಲದಾಗಿದ್ದರೂ ಜೀವನ ಮರಣ

ಕಾಲದೊಳ್ ಹರಿರಾತಂ ಮಾಡಿದ ಗೋವಿಂದ ನಾಮಕೀರ್ತನದಿಂದಿವನಪಾಪ ವಿಷ್ಟೆ
ರೊಳೆ ಪರ್ಯವಸಾನಮನೆಯ್ದಿತ್ತು. ಆಕಾಲದೊಳ್ ವೈಕುಂಠಪ್ರಿಯನೆಂದುಂ, ಸತ್ಯ
ನಿಷ್ಠನೆಂದುಂ ಕಾಶ್ಮೀರ ದೇಶವಾಸಿಗಳಾದ ಇರ್ವರು ಬ್ರಾಹ್ಮಣೋತ್ತಮರು ಮತ್ತಂ
ಕೆಲಬರ್ ಬ್ರಾಹ್ಮಣರೊಡಗೂಡಿ ನಾರಾಯಣಾದ್ರಿಯೊಳಿರುವ ಭಗವಂತನ ಸೇವೆಯಂ
ಮಾಡಿಕೊಂಡು ಸ್ವದೇಶಾಭಿಮುಖರಾಗಿ ತೆರಳುವಮಾರ್ಗದೊಳ್ ಬಂದಾನೊಂದು
ರಮಣೀಯವಾದ ಸರೋವರಮಂ ಕಂಡು ಅಲ್ಲಿ ಸ್ನಾನಾದಿನಿತ್ಯಕರ್ಮಂಗಳಂಮಾಡಿ ಪರಿ
ಶುದ್ಧವಾದ ಸ್ಥಳದೊಳ್ ಪಾಕಮಂಮಾಡಿ ಭಗವದಾರಾಧನೆಗೆಯ್ದು ಪ್ರಸಾದಮಂ
ಸ್ವೀಕರಿಸಿ ಭಗವತ್ಕಥಾಶ್ರವಣದಿಂ ಕಾಲಕ್ಷೇಪದೊಳಿರುತಿರ್ದರು. ಆ ಸಮಯದೊಳ್
ಬ್ರಹ್ಮರಾಕ್ಷಸಂ ವನಾಂತರದೊಳಲ್ಲಲ್ಲಿ ಸಂಚರಿಸುತ್ತಿರಲ್ ಸಮಸ್ತ ಪಾಪಂಗಳಿಗಂ,
ಪ್ರಾಯಶ್ಚಿತ್ತಮೆಂದು ಶ್ರುತಿಸ್ಮೃತಿ ಪುರಾಣಗಳೊಳ್ ಪ್ರಸಿದ್ಧಮಾದ, ಭಗವನ್ನಾಮ
ಸಂಕೀರ್ತನದ ಅಕ್ಷರಂಗಳ್ ದೂರದಿಂದೀತನ ಕಿವಿಯೊಳ್ ಬಿದ್ದವು ಅದಂಕೇಳಿ ತನ್ನ
ಪತ್ನೀಪುತ್ರಾದಿಗಳಂ ಗೃಧ್ರರೂಪದೊಳಿದ್ದ ತನ್ನ ಅನುಚರರಂ ಕೂಡಿಕೊಂಡು ಮುಂ
ದೆಮುಂದೆ ಬರುತಿರಲ್ ಆತನ ಹೃದಯ ಮೊಂದುವಿಧವಾದ ಪರಿಪಾಕಮನೊಂದಿ ಪ್ರಸ
ನ್ನವಾದುದು. ಅದುವರೆಗು ಮೆಲ್ಲಿಯುಂ ದೃಷ್ಟಿಗೋಚರವಾಗದ ತೀರ್ಥಮಾಗಳೀ
ತನಕಣ್ಣಿಗೆ ಗೋಚರವಾದುದು. ವಿಷ್ಣುಭಕ್ತರ ಪಾದಸಂಬಂಧದಿಂ ಪಾವನವಾದ
ಆ ತೀರ್ಥಮಂಕುಡಿದು ಆ ವೈಷ್ಣವೋತ್ತಮರಂನೋಡಿ ಮನದೊಳು ಬಂದು ಉಲ್ಲಾ
ಸಮಂ ತಳೆದಂ ಆಪದರ್ಗಳು ಮಾನೀರಂಕುಡಿದು ಅಲ್ಲಲ್ಲಿ ಚೆಲ್ಲಿದ ಭೋಜನಪಾತ್ರೆ
ದೊಳ್ ಮಿಕ್ಕಿರ್ದ ಪ್ರಸಾದಕಣಗಳ ನಾರಿಸಿಕೊಂಡು ಅದರಿಂ ಜನ್ಮಾಂತರ ಸ್ಮೃತಿಯ
ನೆಯ್ದಿದವು. ಆ ಬ್ರಹ್ಮರಾಕ್ಷಸನಿಗುಂ ಯಮನಿಂದುದಿತವಾದ ವಾಕ್ಯವು ಸ್ಮೃತಿಪಥವ
ನೇರಿತು. ಎಲೈಋಷಿಗಳೇ! ವಿಷ್ಣುಭಕ್ತರ ಪಾದತೀರ್ಥದಿಂ ಪರಿಪೂತರಾದವರಿಗೆ ಮು
ಕ್ತಿಯೇ ಉತ್ತಬಿತ್ತದಬೆಳೆಯಾಗಿರುವಲ್ಲಿ ಪೂರ್ವಜನ್ಮಸ್ಮೃತಿಯುಂಟಾಗುವುದು ಆಶ್ಚ
ರ್ಯಮಲ್ಲವು. ಆಗಲಾಬ್ರಹ್ಮರಾಕ್ಷಸನು ಅಂಥಾಸ್ಮರಣವುಂಟಾದುದರಿಂದ ಸಂತೋ
ಷಿಸಿ ಆಹಾ ? ಈ ಮಹಾನುಭಾವರೇ ಯಮಧರ್ಮರಾಜನಿಂ ಪೇಳಲ್ಪಟ್ಟವರಾಗಿ ಇರ
ಬಹುದು ಹಾಗಲ್ಲದೆ ಎನಗೆಜನ್ಮಾಂತರಸ್ಮರಣಂ ಎಂದಿಗೆಪುಟ್ಟುವುದು ? ಆದುದರಿಂದಿವರ
ಅನುಗ್ರಹದಿಂದೆನಗೆ ಈ ರಾಕ್ಷಸಜನ್ಮವಿಮೋಚನ ಮಾದೀತೆಂದು ನಿಶ್ಚಯಿಸಿ ನಾಲ್ಕಡಿ
ಮುಂದೆಬಂದು ದೂರದಿಂದಲೆನಮಸ್ಕರಿಸಿನಿಂತಿರ್ದಂ. ಘೋರರೂಪಮಿರ್ದುಂನಮ್ರ
ನಾಗಿರುವ ಆ ಬ್ರಹ್ಮರಾಕ್ಷಸನಂನೋಡಿ ಸತ್ಯನಿಷ್ಠರುಂ ವೈಕುಂಠಪ್ರಿಯರುಂ ನೀನಾ
ರುನಿನ್ನೊಡನಿರ್ಪ ಈ ರಾಕ್ಷಸರಾರೆಂದು ಕೇಳಲಾಬ್ರಹ್ಮರಾಕ್ಷಸನು ತನ್ನಪೂರ್ವಜ
ನ್ಮದಿಂದಂದಿನವರೆಗುಂ ನಡೆದವೃತ್ತಾಂತಮನರುಹಿ ಈ ಪಾಪದಿಂತಾನುತ್ತೀರ್ಣನಾಗು
ವುದೆಂತುಟೋಎಂದು ಪುನಃನಮಸ್ಕರಿಸಿದನು. ಅತಿಕರುಣಾಶೀಲರಾದ ಆ ಬ್ರಾಹ್ಮ

ಶ್ರೋತ್ರಿಯರುಂ ಪಶ್ಚಾತ್ತಾಪಗೊಂಡು ಇವನಂ ಉತ್ತೀರ್ಣನಾಗಿ ಮಾಡುವೆವೆಂದು ಆಲೋಚಿಸಿ ಸತ್ಯನಿಷ್ಠನಿಂತೆಂದಂ ಓ ಬ್ರಹ್ಮರಾಕ್ಷಸನೆ ನಿನ್ನಪಾಪ ಪರಿಹಾರಾರ್ಥವಾಗಿ ಭಗವನ್ನಾಮ ಸಂಕೀರ್ತನೆಯಂ ಮಾಡು ಹರಿನಾಮಸ್ಮರಣದಿಂ ಪಂಚಮಹಾಪಾತಕಂಗಳುಂ ಶೀಘ್ರದಿಂ ಪೋಗುವವು. ಉಪಪಾತಕಗಳು ಪೋಗುವದಂ ಪೇಳಲೇಕೆ. ಈ ಲೋಕದೊಳಾವನಾದೊಡಂ ಭಗವತ್ಕಥೆಗಳಂಬಿಟ್ಟು ಇತರ ಕಥೆಗಳಂ ಪೊಗಳುವನೋ ಆ ಮೂಢಾತ್ಮಂ ಪಾಲುಂಬುದಂಬಿಟ್ಟು ಕಲಗಚ್ಚಂ ಪೀರುವಂ ದೇವಾಸುರರ್ ಮಂದರಪರ್ವತದಿಂ ಪಾಲ್ಗಡಲಂ ಕಡೆದತಿ ಪ್ರಯಾಸದಿಂ ಸಂಪಾದಿಸಿದ ಅಮೃತಕ್ಕಿಂತಲು ಮತಿಶಯಮಾದ ಈ ನಾಮಾಮೃತಂ ಸುಲಭವಾಗಿ ರಸನೆಯೊಳಿರ್ದ್ದರುಂ ಸವಿಯದ ಚೇತನರ ದೌರ್ಭಾಗ್ಯಮಿನ್ನೆಷ್ಟು ಬಲಿಷ್ಟವೋ ಭಗವನ್ನಾಮಸಂಕೀರ್ತನಮೆಂಬುದು ಸಂಸಾರಮೆಂಬ ಕೆಸರಿಂ ಮಲಿನರಾದವರಿಗೆ ತೀರ್ಥವಗಾಹನದಂತೆ ಪಾಪಮೆಂಬ ಕಾಳಾಹಿಗೆ ಗಾರುಡ ಮಂತ್ರವಾಗಿಯುಂ ಅಧ್ಯಾತ್ಮಿಕಂ ಆದಿಭೌತಿಕಂ ಆದಿದೈವಿಕಮೆಂಬ ತಾಪತ್ರಯಮೆಂಬ ಮಹಾಜ್ವಾಲೆಯಂ ನಂದಿಸುವ ಜಲಧಾರಾವರ್ಷ ವಾಗಿರುವದು. ನಾರಾಯಣನೆಂಬ ನಾಲ್ಕಕ್ಷರಮಂ ಉಚ್ಚರಿಸದಬಾಯಿ ಹುತ್ತದಂತೆಯುಂ, ನಾಲಿಗೆಯುಂ, ಸರ್ಪದಂತೆಯುಂ, ಎಣಿಸಲ್ಪಡುವದು. ಪಾಪಿಜನ್ಮದೊಳಿರ್ಪವರ್ಗೆ ಹರಿನಾಮದೊಳರುಚಿಯುಂ, ಬರಿಮಾತಿನೊಳತಿರುಚಿಯುಂ, ಪುಟ್ಟುವುದುಚಿತಂ ಒಂಟೆಗಳ್ ಸಹಕಾರ ಪಲ್ಲವಮನೊಲ್ಲದೆ ಬೇವಂಬೆಲ್ಲಮೆಂದು ಮೆಲ್ಲುವದಿಲ್ಲವೆ? ನಾಮಸಂಕೀರ್ತನ ವಿಮುಖರಮುಖಮಂ ನೋಡದೆ ಯಮಭಟರು ನರಕದೊಳ್ ತಳ್ಳುವರು ಅದುದರಿಂ ನಾಮಸಂಕೀರ್ತನಕ್ಕೆಣೆಯಾದ ಧರ್ಮವಾವುದುಮಿಲ್ಲಂ—ವೇದೋದಿತ ಕರ್ಮಂಗಳುಂ ತಪಮುಂ ಯೋಗಮುಂ ಜ್ಞಾನಮುಂ ಕೊಡುವ ಫಲಂಗಳಂ ನಾಮಸಂಕೀರ್ತನಮೇ ಶೀಘ್ರದಿಂ ಕೊಡುವುದು. ಆದುದರಿಂದೆಲೈ ಬ್ರಹ್ಮರಾಕ್ಷಸನೇ ನಿನ್ನಪಾಪ ಪರಿಹಾರಾರ್ಥವಾಗಿ ನಾರಾಯಣನಾಮಮಂ ನಿಕ್ಷೇಪದಂತೆ ನಾಲಿಗೆಯೊಳಿರಿಸು ಎನಲು ವೈಕುಂಠ ಪ್ರಿಯರು ಮಿಂತೆಂದರ್—ಓ ಬ್ರಹ್ಮರಾಕ್ಷಸನೇ ನನ್ನವಾಕ್ಯಮನವಧರಿಸು ನಿನ್ನ ಪಾಪಂ ತೊಲಗುವದಕೆ ನಾರಾಯಣಾದ್ರಿಗೆ ಪೋಗಿ ಆಪರ್ವತಪ್ರಾಂತದೊಳ್ ಭಾಗವತರ ಪಾದಸಂಬಂಧಮೊಂದಿ ದೇವತೆಗಳಿಗುಮುಪಾದೇಯಮಾದ ತೀರ್ಥಂಗಳೊಳ್ ಮಿಂದು ಆಪರ್ವತಮಂ ಪ್ರದಕ್ಷಿಣಮಾಡುತ್ತುಂ ನಮಸ್ಕರಿಸುತ್ತುಂ ನಾಮಸಂಕೀರ್ತನಂ ಮಾಡುತ್ತಮಿದ್ದರೆ ನಿನ್ನೊಳ್ ನಾರಾಯಣನ ಕಟಾಕ್ಷಮುಂಟಾಗಿ ಪಾಪವಿಮೋಚನ ಮಾಗುವುದೆಂದುಪೇಳೆ ಆ ಈರ್ವರುಂ ಕುತೂಹಲಿಗಳಾಗಿ ಪೇಳಲು ಬ್ರಹ್ಮರಾಕ್ಷಸನುಂ ಅವನ ಭಾರ್ಯೆಯುಂ ಮಕ್ಕಳುಂ ಪರ್ದುಗಳೊಡನೆ ಯಾದವಾದ್ರಿಗೆ ಬಂದು ಪ್ರದಕ್ಷಿಣ ನಮಸ್ಕಾರಗಳಂ ಮಾಡುತ್ತುಂ ತತ್ಪುರಿ ಸರದೊಳಿರುವ ಸರಸಿಗಳ ತೀರ್ಥಮಂ ಕುಡಿಯುತ್ತೈದಾರುಮಾಸಮಂ ಕಳೆದರು. ಇಂತಿರಲ್ ನಾರಾಯಣ

ಸುಂ ಕರುಣಾರಸ ತರಂಗಿತವಾದಂತರಂಗಮುಳ್ಳವನಾಗಿ ಚತುರ್ವೇದಿ ಮಾಡಿದ ಅವೆ ಪ್ಯಾಪರಾಧವಂ ಮರೆತು ದ್ವಾರಪಾಲಕರಾದ ಜಯವಿಜಯರಂ ಕರೆದು ಮೃದುರ ವಚನದಿಂ ದಿಂತೆಂದರು. ಪೂರ್ವಕಾಲದೊಳ್ ಚತುರ್ವೇದಿಯೆಂಬ ಬ್ರಾಹ್ಮಣಂ ಪಾಪಾತಾಪಚಾರದಿಂ ಸಪರಿವಾರನಾಗಿ ಬ್ರಹ್ಮರಾಕ್ಷಸನಾದಂ ಆತನೀಗಳೆನ್ನ ನಿತ್ಯಮುಂ ಪ್ರದಕ್ಷಿಣಂಗೆಯ್ದು ನಮಸ್ಕರಿಸುತಂ ಎನ್ನ ಭಕ್ತರಿಗೆ [illegible] ಗಳಿಂ ಕವಮುಳ್ಳುಗುತಂ ಅಡಿಗಡಿಗೆನ್ನ ನಾಮವಂ ಪೊಗಳುತಮಿರ್ಪಂ [illegible] ಕ್ತನಿಗೆ ಪರಾಧೀನನಾಗೆಲರಿಯಿಂ ಈಕ್ಷಣದೊಳಾತನಂ ಪುತ್ರ [illegible] ಸಮೇತನಾಗಿ ಕ್ರಮವಾಗಿ ತೀರ್ಥಂಗಳೊಳ್ ಸ್ನಾನಮಿಗೆಯ್ಸಿ [illegible] ದು ನನ್ನ ಭಕ್ತರ ಪಾದತೀರ್ಥದಿಂ ಪರಿಪೂರಿತರಾದವರ್ಗೆ ಸಿಂಹದಮಾದಿ [illegible] ತ ಪಾಪಂಗಳ್ ನಿಲ್ಲಲಾರವು ಎನಲು ಜಯವಿಜಯರುಂ ಕುತೂಹಲದಿಂ ಬ್ರಹ್ಮರಾಕ್ಷಸನ ಬಳಿಗೆಬಂದು ಎಲೈ ಬ್ರಹ್ಮರಾಕ್ಷಸನೆ ನೀಂ ಮಾಡಿದ ಪ್ರದಕ್ಷಿಣ ನಮಸ್ಕಾರಗಳಿಂದಲುಂ ನಾಮಸಂಕೀರ್ತನದಿಂದಲುಂ ಶ್ರೀಪತಿಯಾದ ನಾರಾಯಣಂ ನಿನ್ನೊಳ್ ಪ್ರಸನ್ನನಾಗಿರುವಂ ನಾಮಸಂಕೀರ್ತನಕೆ ಸದೃಶವಾದ ಭಗವತ್ಪ್ರಸಾದ ಮಾವದುಮಿಲ್ಲಂ. ಆದುದರಿಂ ನೀಂ ಅಷ್ಟತೀರ್ಥಗಳೊಳ್ ಕ್ರಮವಾಗಿ ಮಿಂದು ಅನಂತರದಲ್ಲಿ ಕಲ್ಯಾಣೀ ತೀರ್ಥದೊಳ್ ಸ್ನಾನಮಾಡಿದರೆ ಪರಿಶುದ್ಧನಾಗುವಿ ಎನಲು ಚತುರ್ವೇದಿಯುಂ ಹರ್ಷಯುಕ್ತನಾಗಿ ತನ್ನ ಪರಿವಾರದೊಡನೆ ಆ ಜಯವಿಜಯರು ತೋರಿದ ತೀರ್ಥಗಳೊಳು ಕ್ರಮವಾಗಿ ಸ್ನಾನಮಾಡಿದನು. ಪ್ರಥಮದೊಳ್ ವೇದಪುಷ್ಕರಿಣೀ ಅನಂತರದೊಳ್ ದರ್ಭತೀರ್ಥ, ಪದ್ಮತೀರ್ಥ, ಯಾದವೀನದೀ, ಪೈತೃತೀಯ, ನಾರಾಯಣ ವೈಕುಂಠಗಂಗೆಗಳೆಂಬೀ ಕ್ರಮದಿಂ ಸ್ನಾನಕಾಲದೊಳೆಲ್ಲಂ ನಾರಾಯಣನಾಮಮಂ ಮೂರಾವರ್ತಿ ಉಚ್ಚರಿಸುತಿರ್ದನು. ಈ ಪ್ರಕಾರದಿಂದಷ್ಟತೀರ್ಥ ಸ್ನಾನದಿಂ ಅವನಿಗುಂ ಅವನ ಪುತ್ರಾದಿಗಳಿಗುಂ ಬ್ರಹ್ಮರಾಕ್ಷಸ ರೂಪಮುಡುಗಿ ಬ್ರಾಹ್ಮಣರೂಪಮಂ ಕುರಿಸಿದುದು. ಬ್ರಾಹ್ಮಣರೂಪ ಚೆಲ್ವಮಾದ ಶಿಖಾಯಜ್ಞೋಪವೀತಂಗಳುಂ ದಂಡಕುಂಡಲ ಮೃಡಲಪವಿತ್ರ ಧೌತೋತ್ತರೀಯಾದಿಗಳಿಂದಲುಂ, ಸುರೂಪನಾಗಿ ಧರ್ಮಶೀಲನಾಗಿಯುಂ, ಸರ್ವಭೂತಗಳೊಳು ದಯೆಯುಂ, ಸಮಬುದ್ಧಿಯುಂ, ಮೃದುಭಾಷೆಯುಂ ಶಾಂತಮಾನಸಮುಮಾಗಿ ಸತ್ಯೋತ್ತರನಾದಂ, ಇಂತು ಬ್ರಾಹ್ಮಣಗುಣಯುಕ್ತನಾದ ಚತುರ್ವೇದಿಗೆ ಕಲ್ಯಾಣತೀರ್ಥದಲ್ಲಿಯುಂ ಸ್ನಾನಮಾಡಲು ಅರ್ಹತೆಯುಂಟಾದುದು ಕ್ರಮದಿಂದಲ್ಲಿಯುಂ ಸ್ನಾನಮಾಡಿದ ಮಾತ್ರದಿಂದವನಿಗೆ ಜನ್ಮಾಂತರದೊಳಧಿಕರಿಸಿದ ನಾಲ್ಕುವೇದಂಗಳುಂ ಶಾಸ್ತ್ರಗಳುಂ ಕರತಲಾಮಲಕದಂತೆ ಉಪಸ್ಥಿತವಾದುದು. ಇಂತು ಕಲ್ಯಾಣತೀರ್ಥದ ಮಹಿಮೆಯು ಅನ್ಯಾದೃಶವಾಗಿರುವುದು. ಆವನು ಆತೀರ್ಥದೊಳ್ ಸ್ನಾನವಂ ಮಾಡುವನೊ ಅವನ ಪಾದತೀರ್ಥ ಮಿಂದ್ರಾದಿಗಳನುಂ ಪಾವನಗೊಳಿಸುವುದು. ಅನಂತರದೊಳ್ ಜಯವಿಜಯರು ಆ ಬ್ರಾಹ್ಮಣೋತ್ತಮ

ನಿಗೆ ದ್ವಾದಶೋರ್ಧ್ವ ಪುಂಡ್ರಗಳನಿಕ್ಕಿ ತುಲಸೀಮಣಿಗಳ ಮಾಲೆಯೊಡಗೂಡಿದ ಸರ ಸಿಜಮಣಿ ಸರಮಂ ಕೊರಳೊಳ್ ಧರಿಸಿ ಶಂಖಚಕ್ರಾದ್ಯಂಕನಮಂಮಾಡಿ ನಾರಾಯಣನ ಸಾನ್ನಿಧ್ಯಮನೆಯ್ದಿಸಿದರ್ ಭಗವದಸಾಧಾರಣ ಚಿಹ್ನವಾದ ಈ ಶಂಖಚಕ್ರಾದ್ಯಂಕ ನಂ ಚಾತುರ್ವರ್ಣಗಳಿಗುಂ ಗ್ರಾಹ್ಯಮಾಗಿಯುಂ, ಸಕಲ ಕರ್ಮಾರ್ಹತೆಯುಂ ಸತ್ಪರಿ ಗ್ರಹಮುಂ ಕೊಡುವದಾಗಿಯುಂ, ದೇಹಾತ್ಮಗಳೆರಡಕ್ಕುಂ ಸಂಸ್ಕಾರ ರೂಪವಾಗಿ ಯುಂ, ಮುಕ್ತಿ ಹೇತುವಾಗಿಯುಂ ಇರುವುದೆಂದು ಸಕಲ ವೇದಶಾಸ್ತ್ರ ಪ್ರಮಾಣಗ ಳುಂ ಪೇಳುವುದರಿಂದಾ ವೈಷ್ಣವ ಚಿಹ್ನಧಾರಿಯಾದ ಚತುರ್ವೇದಿಯುಂ, ನಾರಾಯ ಣನ ಸೇವೆಯಂಮಾಡಿ ಸಪುತ್ರ ಕಳತ್ರ ಬಂಧುಗಳೊಡಗೂಡಿ ಕೆಲವುಕಾಲಂ ಭಗವಂತ ನಂ ಆರಾಧಿಸುತ್ತಿದ್ದು ಅನಂತರದೊಳ್ ನಿರವಧಿಕವಾದ ಭಗವತ್ಕಟಾಕ್ಷದಿಂ ಮೋಕ್ಷ ಸಾಮ್ರಾಜ್ಯಮನೆಯ್ದಿದಂ—ಇಂತು ಚತುರ್ವೇದಿಯ ಮೋಕ್ಷದ ಕಥೆಯಂ ಭಕ್ತಿಪೂರ್ವ ಕವಾಗಿ ಕೇಳುವವರುಂ ಪಠಿಸುವವರುಂ, ಸಕಲಪಾಪಂಗಳಿಂ ಬಿಡಲ್ಪಟ್ಟು ನಿರಪಾಯ ಮಾದ ಮುಕ್ತಿಯನೆಯ್ದುವರ್. ಈ ಪ್ರಕಾರದಿಂ ನಿರುಪಾಧಿಕ ಸ್ವಾಮಿಯಾದ ನಾರಾ ಯಣಂ ತನ್ನ ಕಟಾಕ್ಷದಿಂ ಚೇತನರಂ ರಕ್ಷಿಸುವುದಕ್ಕೆ ಅವಾವುದೊಂದೊಂದು ವ್ಯಾಜ ಮಂ ಕಲ್ಪಿಸಿ ಪಕ್ಷಿಮೃಗಾದಿಗಳಿಗು ಮವಿಶೇಷವಾಗಿ ರಕ್ಷಿಸುತ್ತಿರುವಂ.

---

ಶ್ರೀಃ

## ಒಂಭತ್ತನೆಯ ಅಧ್ಯಾಯವು.

ವೃ॥ ಮೈತ್ರೇಯಗಾಚಾರ್ಯಭಾವ ಪ್ರಥಿತಮುನಿಪುರಾಣ ಪ್ರಮಾ
ಣಂಗಳಿಂದ। ತತ್ಪುತ್ರೀಯ ಸುಶಾಸ್ತ್ರಭಾವಪ್ರಕಟಿತ ನಿಖಿಲಾಮ್ನಾ
ಯತತ್ವಾರ್ಥದಿಂದಿ ॥ ಸ್ವೈತ್ರ್ರಶ್ರೀ ಪಾಂಚರಾತ್ರೋದಿತ ಭಗ
ವದಭಿಪ್ರೇತಸಾರಾರ್ಥದಿಂದಂ। ಶ್ರೋತ್ರಾನಂದಪ್ರದ ಶ್ರೀ ಯ
ದುಗಿರಿ ನಿಲಯಾತ್ರೇಃ ಶಸೀನೇಶ್ವರಣ್ಯಂ ॥

ಋಷಿಗಳ್ ಕೇಳುವರು ಎಲೈನಾರದರೆ ನೀಂ ಬಣ್ಣಿಸಿದ ಕಥೆಯುಂ ಅತ್ಯಾಶ್ಚರ್ಯ ಕರಮಾಗಿರುವುದು. ವಿಷ್ಣುಭಕ್ತರೊಳ್ ಮಾಡಿದಪರಾಧಕೆ ವಿಷ್ಣುಭಕ್ತರಿಂ ಪರಿಹಾರ ಮಾಗುವ ವಿಚಿತ್ರಮಾಗಿರುವುದು. ದತ್ತಾತ್ರೇಯ ಮುನೀಂದ್ರನು ಆ ಯಾದವಾದ್ರಿ ಯೊಳ್, ಪಾಷಂಡಮತ ಖಂಡನಂ ಮಾಡಿದ ಕಥೆಯಂ ಪರಿಷ್ಕರಂ ಮೈತ್ರೇಯನಿಂಗೆ ದತ್ತಾತ್ರೇಯರುಪದೇಶಂಗಯ್ದ ಕಥೆಯಂ ಮತ್ತಂ ವಿಶೇಷಂಗಳಂ ಪೇಳಬೇಕೆನಲ್ ನಾರದ ನಿಂತೆಂದಂ— ಎಲೈ ಮುನಿಶ್ರೇಷ್ಠರುಗಳಿರಾ ಪೂರ್ವಕಾಲದೊಳ್ ಶಾಕಲ್ಯಲೋಕಾ

ಕ್ಷಸೊದ ಪ್ರಭೃತಿಗಳಾದ ದುರ್ವಾದಿಗಳುಂ ಮತ್ತಂ ಪಲವಿಧಪಾಷಂಡಿಗಳುಂ ಪ್ರಬಲಿಸಿ ವೇದಮಾರ್ಗಮಂ ಕೆಡಿಸಿ ತತ್ವಜ್ಞಾನಮಂ ನಳಿದರೆಂತೆಂದರೆ—ದೇಹಾತಿರಿಕ್ತನಾದ ಆತ್ಮನಿಲ್ಲವೆಂದುಂ, ದೇಹವೇ ಅಹಂಶಬ್ದವಾಚ್ಯವಾಗಿರುವುದರಿಂದೇಹಾನುಗುಣವಾಗಿರಬೇಕೆಂದುಂ, ಪ್ರತ್ಯಕ್ಷಮಲ್ಲದೆ ಶಾಸ್ತ್ರಚೋದಿತವಾದ ಯಜ್ಞದಾನತಪೋಯೋಗಾದಿ ಪರೋಕ್ಷಫಲವ್ಯಾಪಾರಂಗಳ್ ನಿಷ್ಫಲವೆಂದುಂ ಕೆಲರ್ ಚಾರ್ವಾಕರುಂ ದೇಹಾತಿರಿಕ್ತ ಆತ್ಮನಂ ಸ್ವೀಕರಿಸಿ ಆ ಆತ್ಮನುಂ ಪ್ರತಿಕ್ಷಣದೊಳುಂ ಪುಟ್ಟುವುದುಂ ಅಳಿವುದುಂ ಉಂಟೆಂದು ಕೆಲಬರುಂ ಮತ್ತಂ ಕೆಲಬರ್ ಅವಾಙ್ಮನಸಗೋಚರನಾಗಿರುವಂ ಅವನಿಗುಮಂತರ್ಯಾಮಿಯಾದ ಪರಮಾತ್ಮನಿಲ್ಲವೆಂದುಂ ಮತ್ತಂ ಕೆಲಬರ್ ಪರಮಾತ್ಮನನೊಪ್ಪಿ ಅವನ ತತ್ವಮನರಿಯದೆ ಬ್ರಹ್ಮರುದ್ರಾದಿಗಳೊಳೊರ್ವನೆಂದು ತಮ್ಮ ತಮ್ಮ ಇಚ್ಛಾವಾದಗಳಿಂ ಲೋಕಮೆಲ್ಲಮಂ ಮೋಹಪಡಿಸಿ ಜ್ಞಾನಮಾರ್ಗಮಂ ನಿರೋಧಿಸುತಿರಲ್ ವೇದಪುರುಷರುಂ ಅತ್ಯಂತವಿಷಣ್ಣರಾಗಿ, ಕ್ಷೀರಾಬ್ಧಿಯೊಳ್ ಭಗವಂತನಂ ಕಂಡು, ವಿಜ್ಞಾಪಿಸಿದರ್. ಎಲೈ ಪರಮ ಪುರುಷನೇ! ಸಕಲಚರಾಚರಂಗಳಿಗುಂ ನೀಂ ಸ್ವಾಮಿಯಾಗಿ ಸರ್ವಶೇಷಿಯಾಗಿರುವಿ. ಚಿದಚಿದಾತ್ಮಕವಾದ ಪ್ರಪಂಚಮೆಲ್ಲಮುಂ ನಿನಗೆ ಶೇಷವಾಗಿರುವುದು ಈ ವಿಷಯದೊಳು ಅನಾದಿನಿಧನರಾದ ನಾವು ಪ್ರಮಾಣವಾಗಿಯುಂ, ಸತ್ವನಿಷ್ಠರಾದ ಜ್ಞಾನಿಗಳ್ ಪುಮಾತ್ಯಗಳಾಗಿಯುಂ ನಿಯುವರ್. ಈಗಲಾನಿಯುಮುಮುಳಿದು ಪಾಷಂಡವಾದದಿಂ ನಮ್ಮ ಸಾರ್ವವಾದಭಾವನೆಗಳ್ ತಿಳಿಯದೆ ದುರ್ವಾದಿಗಳ ಇಚ್ಛಾವಾದಿಗಳಿಗೆ ಜ್ಞಾನಂ ಸಂಕುಚಿತಮಾದುದು ಸ್ನಾನಾದಿ ನಿತ್ಯಕರ್ಮಂಗಳ್ ಪಲಾಯನ ಮಾಡಿದುದು. ವರ್ಣಾಶ್ರಮಧರ್ಮಂಗಳ್ ನಿರ್ಮೂಲವಾದುದು. ಯೋಗಂ ಹೀನಿದುದು. ದಾನಂ ದೀನಮಾದುದು. ಆದುದರಿಂದ ಈ ಪಾಷಂಡವಾದವೆಂಬ ಕೆಸರೊಳ್ ಮುಳಿಗಿರುವನವಗುಂ, ಹಸ್ತಾವಲಂಬನಮಿತ್ತತಿ ನಮ್ಮನುಂ ತತ್ವಜ್ಞಾನಮುನುಂ, ಉದ್ಧರಿಸಬೇಕೆಂದು ವಿಜ್ಞಾಪಿಸಲ್ ವಾಸುದೇವನುಂ, ವೇದ ಪುರುಷರಂ, ಸಂತೈಸಿ ನಾಂ ಭೂಮಂಡಲದೊಳ್, ಆಚಾರ್ಯರೂಪದಿಂದ ಅವತರಿಸುವಂ ನೀವೆನಗೆ ಶಿಷ್ಯರಾಗಿರೆಂದಭಯಮನಿತ್ತು ದತ್ತಾತ್ರೇಯನಾಗವತರಿಸಿದಂ, ವೇದಂಗಳುಂ ಪುರುಷಾಕಾರದಿಂ ಶಿಷ್ಯಭಾವಮಂ ವೇದಾಂಗಂಗಳಾರುಂ ತಚ್ಛಿಷ್ಯಭಾವಮಂ ಪೊಂದಿರಲ್ ದತ್ತಾತ್ರೇಯಂ ಸನ್ಯಾಸರೂಪದಿಂ ಜ್ಞಾನಸ್ಥಾಪನಂಗೆಯ್ಯಲಾಲೋಚಿಸಿ ಗಂಡಕೀಪ್ರಯಾಗವಾದಿಯಾಗಿ ಪುಣ್ಯಸ್ಥಾನಂಗಳೆಲ್ಲಮುಂ ಪಾಷಂಡಿಗಳಿಂದಾಕ್ರಾಂತಮಾಗಿರುವುಗನರಿತು ಸತ್ತ್ವೋತ್ತರವಾದ ಯಾದವಾದ್ರಿಯನೆಯ್ದಿ ವೇದಪುಷ್ಕರಣಿಯೊಳ್ಮಿಂದು ವಿಶಾಲವಾದಶಿಲೆಯೊಳ್ ನಿಂದು, ಕಾಷಾಯವಸ್ತ್ರದ ಪರಿಧಾನಮುಂ ತ್ರಿದಂಡಕಮಂಡಲೂಪವೀತಾದಿ ಪಂಚಮಾತ್ರಾಧಾರಣದಿಂ ಜ್ಞಾನೋದಯಮಂ ಮಾಡಿದರು. ವೇದಪುರುಷರುಂ ಚತುಸ್ಸಾಗರಪರ್ಯಂತವಾಗಿ ಪೋಗಿವಾದದಿಂ ಪಾಷಂಡಿಗಳಂ ಜೈಸಿ ಕೃತಾರ್ಥವಾಗಿಬಂದು ಕಲ್ಯಾಣೀತೀರ್ಥತೀರದೊಳ್ ಶಾಂಡಿಲ್ಯರೊಡ

ನಿವೇದಾರ್ಥಪ್ರಕಾಶಕವಾದ ಶ್ರೀ ಪಾಂಚರಾತ್ರೋಕ್ತ ಪರಮಾರ್ಥ ವಿಚಾರಮಂ ಮಾಡುತಿರುವ ದತ್ತಾತ್ರೇಯರೊಡನೆ ಎಲೈಸ್ವಾಮಿಯೆ! ತಮ್ಮ ಅನುಗ್ರಹದಿಂ ಸಮುದ್ರಾಂತಮಾದ ಭೂಮಂಡಲದೊಳೆಲ್ಲಿಯುಂ ಪಾಷಂಡಿಗಳಂ ಜಯಿಸಿಬಂದೆವು. ರಾಹುವಿಮುಕ್ತನಾದ ಸೂರ್ಯನಂತೆ ಜ್ಞಾನಂ ಭಾಸ್ವರವಾದುದು. ಮತ್ತಂ ನಾವೊಂ ಆಶ್ಚರ್ಯಮಂ ನೋಡಿದೆವೆನಲ್ ದತ್ತಾತ್ರೇಯರುಂ ಸರ್ವಜ್ಞರಾಗಿ ಆ ಅರ್ಥಮನರಿತಿರ್ದುಂ ಅದಂ ಲೋಕದೊಳ್ ಪ್ರಖ್ಯಾತಗೊಳಿಸಬೇಕೆಂಬಭಿಪ್ರಾಯದಿಂ ಅದೇನಾಶ್ಚರ್ಯಮೆಂದು ಕೇಳಲಾ ವೇದಪುರುಷರಿಂತೆಂದರ್. ಒಂದರಣ್ಯದೊಳೊಂದು ಕೋಡಗಂ ಬಂದು ವೃಕ್ಷಾಗ್ರದೊಳಿರುತಿರಲ್ ಪೇರ್ಬುಲಿಯೊಂದು ಪುಳಿಂದನನಟ್ಟಿಕೊಂಡು ಬರಲವಂ ಬೆದರುತೋಡಿಬಂದು ಆ ವಾನರನಿರ್ದ ಮರವನೇರಿದಂ. ಆಗಲಾವ್ಯಾಘ್ರರಾಜಂ ಮರದತುದಿಯೊಳಿರ್ಪ ವಾನರನಂ ನೋಡಿ ಮನುಜರಂತೆ ಸ್ಪಷ್ಟವಾದ ವಾಕ್ಯದಿಂದೆಲೈ ವಾನರನೇ ನಾಂ ನಾಲ್ಕುರು ದಿನದಿಂದ ಆಹಾರವಿಲ್ಲದೆ ಪೀಡಿತನಾಗಿರಲ್ ದೇವರೆನಗೆ ಈ ಶಬರನನಾಹಾರವಾಗಿತೋರಿದಂ. ಆದುದರಿಂದ ಈ ಯೆನ್ನಾಹಾರಮನೆನಗಿತ್ತು ನೀಂ ಪುಣ್ಯಮಂ ಸಂಪಾದಿಸೆನಲ್ ವಾನರನುಂ ಎಲೈ ವ್ಯಾಘ್ರನೇ! ಭಯಾತುರನಾಗಿ ಎನ್ನ ನಿವಾಸಮನೈದಿದ ಈತನಂ ನಾಂ ತಳ್ಳುವುದುಂಟೆ ಧರ್ಮಜ್ಞರಾದವರುಂ ಸತ್ಪುರುಷರುಮವರೆ ಪೊಕ್ಕವರಂ ತೊರೆವರೆ ಎಂದು ಪೇಳಿ ಸುಮ್ಮನಾದುದು. ಆ ಮಾತಂ ಕೇಳಿ ವ್ಯಾಘ್ರಮುಂ ಭಗ್ನಮನೋರಥವಾಗಿ ಚಾಪಲ್ಯದಿಂ ಮುಹೂರ್ತಮಾತ್ರಂ ವೃಕ್ಷಮೂಲದೊಳಿರುತಿರಲ್ ಕಪಿಯುಂ ನಿದ್ರೆಗೈವುತಿರ್ದುದು. ಕುಟಿಲಮತಿಯುಳ್ಳ ವ್ಯಾಘ್ರಮುಂ ಆಬೇಡನಂ ಕುರಿತು ಎಲೈ ಬೇಡನೇ ? ಎನ್ನ ಪಸಿವಡಗಿದೊಡೆ ನಿನ್ನಂ ಬಿಟ್ಟು ಪೋಗುವೆಂ ಆದುದರಿಂ ನಿದ್ರಾಸಕ್ತನಾದ ಈ ವಾನರನಂ ಕೆಳಗೆ ತಳ್ಳು ಅದಂ ಭಕ್ಷಿಸಿ ತೃಪ್ತನಾಗಿ ನಾಂ ಪೋಗುವೆಂ. ನೀನುಂ ಪ್ರಾಣಮನುಳಿಸಿಕೊಂಡು ಪೋಗುವೆ ನಮಿರ್ವರ ಕಾರ್ಯಮುಂ ಲೇಸಾಗುವುದೆನಲ್ ಕ್ರೂರಹೃದಯನಾದ ಕಿರಾತನುಂ ನಿದ್ರಾಪರಾಧೀನನಾದ ವಾನರನಂ ಕೆಳಗೆ ತಳ್ಳಿದಂ. ಲೋಕದೊಳ್ ಕೃತ್ಯಾಕೃತ್ಯಗಳನರಿಯದ ಮೂಢರು ಇನ್ನಾವ ಪಾಪಮಂ ಮಾಡದಿರುವರ್. ಅನಂತರದೊಳ್ ಕೆಳಗೆಬೀಳ್ದ ವಾನರನಂ ಪುಲಿಪಿಡಿದು ಓ ಧರ್ಮಾತ್ಮನೆ! ನೀಂ ಮಾಡಿದ ಧರ್ಮಂ ನಿನಗೆ ಫಲಿಸಿದುದು. ಈಗನ್ನಂ ತುತ್ತುಗೊಂಡರೇನು ಮಾಡುವಿ? ಯೆಂದು ಹಾಸ್ಯಮಂ ಮಾಡಿ ಈಗಳುಂ ನಿನಗೆ ವೈರಿಯಾದ ಆ ಪಾಪಿಯಂ ತಳ್ಳುವುದಾದರೆ ನಿನ್ನಂ ಬಿಡುವೆಂ ಎನಗೆ ನರಮಾಂಸದೊಳ್ ಅತಿಪ್ರೀತಿಯೆನಲಾವಾನರಂ ಪ್ರಹರ್ಷಮಂ ತೋರ್ಪಡಿಸಿ ಆ ವಾಕ್ಯಮನೊಪ್ಪಿ ಪುಲಿಬಾಯಿಂ ತಪ್ಪಿಸಿಕೊಂಡು ಮರವನೇರಿ ಗಡಗಡನೆ ನಡುಗುವ ಬೇಡನಂ ಬೆದರಬೆಡವೆಂದು ಸುಮ್ಮನಾದುದು. ಅದಂ ಕಂಡು ವ್ಯಾಘ್ರನುಂ ಇದೇನು ವಾನರೋತ್ತಮನೆ! ಏಕೆ ಸುಮ್ಮನಿರುವಿಯೆನಲು ಆ ಪ್ಲವಂಗಪುಂಗವನಿಂತೆಂದಂ. ಎಲೈ ಶಾರ್ದೂಲವೇ! ಏಕೆ ವೃಥಾ ದುರಾಸೆ

ಪಡುವಿ ಮೊದಲೊಂದುಸಾರಿ ಶರಣಾಗತನಾದವಂ ವೈರಿಯಾದೊಡಂ ಮಿತ್ರನಾದೊಡಂ ದೀನನಾದೊಡಂ ಗರ್ವಿಯಾದೊಡಂ ಮಹಾಪಾಪಿಯೇ ಆದೊಡಂ ಆತನಂನಾಂ ಬಿಡುವ ನಲ್ಲವೆನಲ್ ಆ ವ್ಯಾಘ್ರಂ ನಿರಾಸೆಯಂ ಪೋದುದು. ಈ ಆಶ್ಚರ್ಯಮಂ ನಾವಿಂದುನೋ ಡಿದೆವೆನಲ್, ದತ್ತಾತ್ರೇಯಭಗವಂತನುಂ ಪುಸಿನಗೆನಕ್ಕು ಶಾಂಡಿಲ್ಯರಮೊಗಮಂ ನೋ ಡಲು ಆ ಶಾಂಡಿಲ್ಯರುಂ ಭಗವದಭಿಪ್ರಾಯಮಂ ತಿಳಿದು ವೇದಪುರುಷರೊಡನೆ ಇದೇನಾ ಶ್ಚರ್ಯಂ ನೀವೆಲ್ಲರಿಗುಂ ಈ ಶರಣಾಗತಪರಿಪಾಲನ ರೂಪಧರ್ಮಮಂ ಪ್ರಕಟಿಸುವರಾ ಗಿರ್ದು೦ ಇದಕೆಮರುಗುವಿರೆನಲ್ ವೇದಪುರುಷರ್ಕಂ ಎಲೈಶಾಂಡಿಲ್ಯರೇ! ನಿಮ್ಮಿಂದೆ ಈಧರ್ಮಮೆಲ್ಲೆಲ್ಲಿಯುಂ ಪ್ರಕಟಿತವಾಗಿರ್ದೊಡಂ ಇದಂ ಅಜ್ಞಾನಿಗಳಾದತಿರ್ಯಗ್ಜಾ ತಿಗಳ್ಗಂ ಅನುಷ್ಠಿಸುವುದಾಶ್ಚರ್ಯಮಲ್ಲವೆ! ಎಂದವಾಕ್ಯಮಂಕೇಳಿ ಶಾಂಡಿಲ್ಯರಿಂತೆಂದರ್ ಎಲೈವೇದಪುರುಷರೇ! ಸಾಧಾರಣವಾಗಿ ಅಜ್ಞಾನಿಗಳೊಳಂ ತಿರ್ಯಗ್ಜಾತಿಗಳೊಳಂ ಆ ಧರ್ಮಂ ನೆಲೆಗೊಂಡಿರುವುದು. ಇದಕ್ಕುದಾಹರಣಮಾಗಿ ಬೇರೆಕಥೆಯುಂಟು, ಅದ ನಾದರಿಸಿಕೇಳ್ವುದು. ನಾಳೀಜಂಘನೆಂದೊಂದು ರಾಜಹಂಸಂ ಗಂಧರ್ವರಾಜಂಗೆಪ್ರೀತಿ ಪಾತ್ರವಾಗಿರ್ದತ್ತು. ಒಂದಾನೊಂದುಸಮಯದೊಳ್ ಓರ್ವಪಾರ್ವಂ ಬಡತನದಿಂ ದೇಶದೇಶವಂ ತಿರುಗುತ್ತ ಆ ಹಂಸಮಿರ್ದೆಡೆಗೈದಿದಂ. ಆ ಮಾನಸೌಕಸಂ ನೌಪವ ನಸ್ಥ್ಯದಿಂದೆಲೈ ಪುರುಷನೆ! ನೀನಾರು ಬ್ರಾಹ್ಮಣನಂತೆ ತೋರ್ಪೆ ನಿನ್ನ ಸತ್ಕರ್ಮಗಳಂ ಬಿಟ್ಟು ಇಂತುವೈಶ್ಯದಿಂ ತಿರುಗುವುದೇತಕೆಂದೊಡೆ ಆ ವಿಪ್ರಂ ತನ್ನದಾರಿದ್ರ್ಯಮಂ ಪೇ ಳ್ಕೊಂಡಂ. ಅದಕಾಹಂಸಶ್ರೇಷ್ಠನುಂ ದಯೆಗೂಡಿ ಎಲೈಬ್ರಾಹ್ಮಣನೇ! ಎನ್ನಮಿ ತ್ರನಾದ ಗಂಧರ್ವರಾಜನಿರ್ಪಂ. ಆತನಬಳಿಸಂದು ನಾಕಳುಪಿದೆನೆಂದೊಡೆ ನಿನ್ನಬಡ ತನಂ ನೀಗುವುದೆನಲಾದ್ವಿಜನುಂ ಪರಮಸಂತೋಷನಾಗಿ ದರಿದ್ರದಬೆಂತೆಯಂಬಿಟ್ಟು, ಗಂಧರ್ವರಾಜನೆಡೆಗೈದಿ ನಾಳೀಜಂಘನಪರಿಗ್ರಹಮಂ ಪೇಳಲವನುಂ ಈ ಬ್ರಾಹ್ಮಣಂಗೆ ತನ್ನಭಂಡಾರಮಂತೋರಿ ನಿನಗೆಬೇಕಾದದ್ರವ್ಯಮಂ ಕೊಳ್ವುದೆನಲತ್ಯಾಶೆಗೊಂಡು ಬಾಡಬನುಂ ತಾಂ ಪೊರಲಾರದಷ್ಟು ದ್ರವ್ಯಮಂಕಟ್ಟಿಕೊಂಡೊಯ್ಯುತ್ತಾ ನಾಳೀಜಂ ಘನಿರ್ದೆಡೆಗೈದಿ ಧನಭಾರದಿಂದಲುಂ ಕ್ಷುದ್ಬಾಧೆಯಿಂದಲುಂ ಪೀಡಿತನಾಗಿ ಮೈಮರೆತು ನಿದ್ರೆಗೈಯುತ್ತಿರುವ ಚಕ್ರಾಂಗನಂಕೊಂದುತಿಂದು ಮುಂದೆಪೋಗುತಿರ್ದ೦. ಆಸಮ ಯದೊಳ್ ಗಂಧರ್ವರಾಜನಭಟರ್ ಕೆಲಬರ್ನಾಳೀಜಂಘನನರಸಿಕಾಣದೆ ಆತನ ರಕ್ಕೆಪು ಕ್ಕಗಳಲ್ಲಲ್ಲಿಬಿದ್ದಿರುವುದಂ ಭಯವಿಭ್ರಾಂತಲೋಚನನಾಗಿ ಅಡಿಗಳೆಡ ಪ್ರಕ್ಕ ತೊಳಲುವ ಡಿಯುತಂ ಪೋಗುತಿರ್ಪ ಬ್ರಾಹ್ಮಣನಂಕಂಡು ಅವನಿಂಗಿತಂಗಳಿಂ ಘಾತುಕನೆಂದರಿದು ಪ್ರಾಣಾಂತಕವಾದ ಶಿಕ್ಷೆಯಂಮಾಡಲು ಆ ಪಾತಕಿಪಾರ್ವಂ ನರಕವುನೆಯ್ದಿದಂ. ಅತಿಕೃತಸುಕೃತದಿಂ ನಾಳೀಜಂಘನಿಂದ್ರಸಭೆಯೊಳಿರ್ದೊಂದುದಿನಂ ಪ್ರಸಂಗವಶದಿ ದೇವತೆಗಳಂಕುರಿತು ಎನ್ನಂಕೊಂದಬ್ರಾಹ್ಮಣನೇನಾದನೆಂದುಬೆಸಗೊಳಲ್ ಪಾತಕಿಯಾ ದವನ ಸೊಲ್ಲನಿಲ್ಲೇತಕೆಪೇಳುವಿ ನಿಲ್ಲಿಸೆನಲ್ ನಾಳೀಜಂಘಂ ಸಂದೇಹಪಟ್ಟಂತವನೆಲ್ಲಿರುವ

ಪೇಳ್ವಾಪವಿನರುಣವೊಂದೆಂದು ಬೇಡಿಕೊಳಲ್ ನಿನ್ನಂ ಕೊಂದಪಾಪದಿಂ ನರಕದೊಳಿರುವನಿಂ
[illegible] ಕೇದೃಶ್ಯ ನಾಳೀಜಂಘನುಂ ದಯಗೊಂಡಿ ಎನ್ನನೆಯ್ದಿದವಂ
[illegible] ನಾನಿಂತು ಸ್ವರ್ಗಸುಖವದೊಳಿರುವುದು ಅನುಚಿತ
[illegible] ಉಪಕಾರಕ್ಕೆ ಎನ್ನ ಸುಕೃತವೆಲ್ಲವಂ ಆ ಬ್ರಾಹ್ಮಣಂಗೇ
[illegible] ಕೊಡಬೇಕೆಂದು ಕೇಳಲ್ ಸುರೇಂದ್ರನುಂ ಎಲೈ ಧಾರ್ಮಿಕನೇ!
[illegible] ಮಹಾಪಾಪಿಯಾನಿನ್ನಂತು ಸಗ್ಗಮಂ ಸೇರಲಪೇಕ್ಷಿಸುವಿ
[illegible] ವಿಧವಾಗಿ ಇಂದ್ರನಂ ನಿರ್ಬಂಧಿಸಿ ತನ್ನ ಧರ್ಮದಿಂದ ಆ
[illegible] ರಿಸಿ ಸ್ವರ್ಗಾರೋಹಣವಂ ಮಾಡಿಸಿದಂ. ಇಂತು ತಿರ್ಯ
ಗ್ಜಾತಿ [illegible] ಸಂರಕ್ಷಣಂ ಸಂದುಬರುವುದೆಂದು ಶಾಂಡಿಲ್ಯರ ವಚನದಿಂ
ವೇದವ್ಯಾಸರ್ ನುಡಿದರ್. ಈ ಪ್ರಕಾರವಾಗಿ ದತ್ತಾತ್ರೇಯರುಂ, ಶಾಂಡಿಲ್ಯರುಂ
ವೇದಪುರುಷರುಂ, ಪರಸ್ಪರಸತ್ಕಥಾಲಾಪದೊಳಿರುವ ಸಮಯದೊಳ್ ವಸಿಷ್ಠಕುಲಭೂ
ಷಣರಾಗಿಯುಂ ಸಕಲತತ್ವಂಗಳಂ ಕರತಲಾಮಲಕದಂತೆ ಅರಿತಿರುವ ಪರಾಶರಮುನೀಶ್ವ
ರಂ ಮೈತ್ರೇಯ ಸಹಿತನಾಗಿ ಬಂದು ದತ್ತಾತ್ರೇಯರಿಂಗೆ ಸಾಷ್ಟಾಂಗವೆರಗಿ ನಿಂದಿರಲ್,
ದತ್ತಾತ್ರೇಯರಿಂತೆಂದರ್. ಎಲೈ ತತ್ವಜ್ಞಾನನಿಧಿಯಾದ ಪರಾಶರನೇ! ನೀಂ ಕ್ಷೇಮ
ದಿಂದಿರುವಿರಾ? ಶಿಷ್ಯಸಹಿತನಾಗಿ ಇಲ್ಲಿ ಬರುವುದಕೆ ಕಾರಣವೇನೆನಲ್ ಆ ಮುನೀಂದ್ರನುಂ
ಎಲೈ ಸ್ವಾಮಿಯೆ! ವಸಿಷ್ಠರ ವರಪ್ರದಾನದಿಂದಲುಂ ಸನತ್ಕುಮಾರನುಪದೇಶದಿಂದಲುಂ
ನಾನರಿತಿರುವ ವಿಷ್ಣುತತ್ವರಹಸ್ಯವಂ ಈ ಪ್ರಿಯಶಿಷ್ಯನಾದ ಮೈತ್ರೇಯನಿಂಗೆಲ್ಲಾ
ಉತ್ತಮಕ್ಷೇತ್ರದೊಳ್ ಬಿತ್ತರಿಸಬೇಕೆಂದು, ಉತ್ತರಬದರಿಕಾಶ್ರಮಕೆ ಪೋಗಿರ್ದೆಂ,
ಅಲ್ಲಿರ್ದ ನರನಾರಾಯಣನುಂ ಇದಕಿಂತಲುಂ ಅತಿಶಯವಾದ ದಕ್ಷಿಣಬದರಿಕಾಶ್ರಮಮೆಂ
ಬೊಂದು ಕ್ಷೇತ್ರಮಿರುವುದು. ಅಲ್ಲಿಗೆ ಪೋಗಿ ಶ್ರೀ ವಿಷ್ಣುಪುರಾಣವಂ ಮೈತ್ರೇಯಂ
ಗುಪದೇಶಿಸುವುದೆಂದು ಆಜ್ಞಾಪಿಸಲಿಲ್ಲಿಗೆ ಬಂದು ಸಾಕ್ಷಾತ್ತಾಗಿ ಆ ನಾರಾಯಣನ
ಅವತಾರವಾದ ನಿಮ್ಮಂ ಕಂಡು ಕೃತಾರ್ಥನಾದೆನೆನಲು ದತ್ತಾತ್ರೇಯರುಂ ಸಂತೋಷಿಸಿ
ಎಲೈ ಪರಾಶರನೇ! ನೀನೀ ಪುರಾಣವಂ ಮೈತ್ರೇಯಂಗೆ ಪೇಳ್ದೊಡೆ, ನಾವುಂ ಕೇಳಿ
ಕರ್ಣಾನಂದವನನುಭವಿಸುವೆವೆಂದು ಪೇಳಲು ಪರಾಶರನುಂ ಕಲ್ಯಾಣೀತೀರ್ಥದ
ಉತ್ತರಭಾಗದೊಳ್ ಪುರಾಣರತ್ನವಂ ಪೇಳಿದರು ಆದುದರಿಂದಾ ಪುಣ್ಯಾಶ್ರಮಕ್ಕೆ ಪರಾ
ಶರಾಶ್ರಮವೆಂದು ಪೆಸರಾದುದು. ಅನಂತರದೊಳ್ ಮೈತ್ರೇಯಸಹಿತರಾದ ಪರಾ
ಶರರುಂ ದತ್ತಾತ್ರೇಯರ ಸಮೀಪದೊಳಿರುವ ಶಾಂಡಿಲ್ಯರಂ ಕುರಿತು ಎಲೈ ಮುನಿ
ಶ್ರೇಷ್ಠರೇ ಸಾಕ್ಷಾದ್ಭಗವದುದಿತವಾದ ಶ್ರೀಪಾಂಚರಾತ್ರಶಾಸ್ತ್ರಮಂ ನೀವು ಪ್ರ
ವಚನಂಗೆಯ್ಯುವಿರಿ ಆ ಶಾಸ್ತ್ರವುಂ ವೇದೋಪಬ್ರಹ್ಮಣವಾಗಿ ವೇದದೊಳ್ ಗೂ
ಢವಾದ ಅರ್ಥವಿಶೇಷಂಗಳಂ ಸ್ಫುಟೀಕರಿಸುವುದು. ಆದುದರಿಂದ ಅದರೊಳ್ ಪ್ರಪಂ
ಚಿತವಾದ ಏಕಾದಶೀ ಮಹಾತ್ಮ್ಯವಂ ತುಲಸೀ ಮಹಿಮೆಗಳಂ ಭಗವತ್ಪ್ರಸಾದದ

ಅತಿಶಯಮಂ ಪೇಳೆ ಎನಲಾ ಮುನೀಂದ್ರನಿಂತೆಂದಂ. ಎಲೈ ಪರಾಶರನೇ ಕೇಳು ಸಕಲ ಜಗತ್ಕಾರಣವಾಗಿಯುಂ, ಜ್ಞಾನಾನಂದ ಸ್ವರೂಪವಾಗಿಯುಂ, ಪರಮ ಯೋಗಿಗಳಿಗುಂ, ದೇಶಕಾಲವಸ್ತುಗಳಿಂದ ಪರಿಚ್ಛೇದ್ಯವಾದ ಪರಬ್ರಹ್ಮ ಮಿರುವುದು, ಅವರ ಸ್ವರೂಪಕ್ಕಿಂತಲೂ, ಪ್ರಿಯವಾಗಿ ಶ್ರೀವೈಕುಂಠದೊಳ್ ನಿತ್ಯಸೂರಿ ಭೋಗ್ಯವಾಗಿ ಅತ್ಯದ್ಭುತ ದಿವ್ಯರೂಪ ದಿವ್ಯಭೂಷಣ ದಿವ್ಯಾಯುಧಂಗಳಿಂದೊಡಗೂಡಿ ಮೂರ್ತಬ್ರಹ್ಮವೆಂದಿರುವುದು. ಇದಲ್ಲದೆಯುಂ ವಾಸುದೇವಸಂಕರ್ಷಣಾನಿರುದ್ಧ ಪ್ರದ್ಯುಮ್ನಾದಿ ವ್ಯೂಹಭೇದಗಳುಂ, ಕೇಶವಾದಿ ದ್ವಾದಶಮೂರ್ತಿ ಭೇದಂಗಳುಂ ಲೀಲಾ ಪರಿಗೃಹೀತವಾದ ಅನಂತಾನಂತಮೆನಿಸಿದವತಾರಂಗಳುಂ, ತತ್ತದವತಾರೋಚಿತವಾಗಿ ಅಭಿಮತಾನುರೂಪ ಸ್ವರೂಪರೂಪ ವಿಭವಾದ್ಯಸಂಖ್ಯೇಯ ಕಲ್ಯಾಣಗುಣ ಪೂರ್ಣೆಯಾದ ಲಕ್ಷ್ಮೀದೇವಿಯೊಡಗೂಡಿ ನಿಖಿಲ ಜಗತ್ಸೃಷ್ಟಿಸ್ಥಿತಿ ಸಂಹಾರಗಳಂ ಲೀಲಾರ್ಥವಾಗಿ ಸ್ವಸಂಕಲ್ಪದಿಂ ನಡೆಸುವ ಈ ದಿವ್ಯದಂಪತಿಗಳ್ ಸ್ವಾಭಾವಿಕಮಾಗಿ ಬ್ರಹ್ಮಾದಿ ಸಮಸ್ತ ದೇವತೆಗಳುಂ ಮನುಷ್ಯಾದಿಗಳುಂ ದಾಸಭೂತರಾಗಿರುವರು. ಆದುದರಿಂ ನಿರುಪಾಧಿಕ ಸ್ವಾಮಿಯಾದವನ ಚರಣಾರವಿಂದಮಂ ದಿನದಿನದೊಳಾರಾಧಿಸುವುದು ಅವಶ್ಯ ಕರ್ತವ್ಯವಾಗಿರುವುದು. ವರ್ಣಾಶ್ರಮಧರ್ಮ ಪರಿಭ್ರಷ್ಟರಾದವರು ಭಗವದಾರಾಧನ ದೊಳನರ್ಹರಾಗಿರುವರು. ಸದಾಚಾರಸಂಪನ್ನರಾದವರಿಗೆ ಭಗವದಾರಾಧನದೊಳ್ ತುಲಸಿಯು ಮುಖ್ಯಸಾಧನ ವಾಗಿರುವುದು. ಸರ್ವಪ್ರಯತ್ನದಿಂ ತುಲಸಿಯು ದುರ್ಲಭವಾಗಿರಲು ತುಲಸೀನಾಮಮಂ ಅನುಸಂಧಿಸಿದಾಗಳುಂ ಭಗವಂತನೊಪ್ಪುವನು ಶ್ರೀಕಾಂತಂ ತುಲಸಿಯಿಂ ಪ್ರೀತಿಗೊಳ್ವಂತೆ ಪದ್ಮಗಳಿಂದಲುಂ ಸೌಗಂಧಿಕಂಗಳಿಂದಲುಂ ಮಲ್ಲಿಕಾಮಾಲತೀ ಕುಂದವಕುಳಪುನ್ನಾಗ ಚಂಪಕಾದಿ ಕುಸುಮಂಗಳಿಂದಲುಂ ಸಂತೋಷಿಸಲಾರಂ ಇದಕೊಂದಿತಿಹಾಸಮುದಾಹರಣವಾಗಿ ಪೇಳುವೆ. ಧರ್ಮಕೇತುವೆಂಬ ರಸಂ ಸಾರ್ವಭೌಮನಾಗಿದ್ದು ಸಕಲವಿಧ ಧರ್ಮಂಗಳಂ ಮಾಡಿ ಒಂದು ದಿನದೊಳ್ ತನ್ನ ಪುರೋಹಿತನಂ ಕರೆದು ಎಲೈ ಬ್ರಾಹ್ಮಣೋತ್ತಮನೇ ನಾನು ನಿಮ್ಮನುಗ್ರಹದಿಂದನೇಕಯಾಗಂಗಳಂ ದಾನಧರ್ಮಂಗಳಂ ವ್ರತೋಪವಾಸಾದಿನಿಯಮಂಗಳಂ ನಡಿಸಿದೆಂ ನಾರಾಯಣಾದ್ರಿಯೊಳ್ ನಾರಾಯಣನ ಅರ್ಚನೆಯಂ ನಾಂ ಮಾಡಲಿಲ್ಲ ಇದು ಬಹಳವಾಗಿ ಮನದೊಳ್ ಕೊರೆಯುವದು ಸಕಲ ಶಾಸ್ತ್ರಗಳೊಳುಂ, ಪುರಾಣಂಗಳೊಳುಂ, ಭಗವದಾರಾಧನಂ ಪ್ರಶಂಸಿಸಲ್ಪಡುವದು. ಆದುದರಿಂ ಭಗವಂತನ ಪ್ರೀತಿಗೆ ಸಾಧನವಾದ ವಸ್ತುವಾವುದು? ಅದಪೇಳ್ವುದೆನಲಾ ಪುರೋಹಿತಂ ಸಮಯಂ ಸಿಕ್ಕಿತೆಂದು ಸಂತೋಷಿಸುತಿಂತೆಂದಂ. ಎಲೈ ರಾಜಶ್ರೇಷ್ಠನೆ ಸುವರ್ಣ ಪುಷ್ಪಮೇ ಭಗವತ್ಪ್ರೀತಿಗೆ ಕಾರಣವಾಗಿರುವುದು. ಪುರುಷಸೂಕ್ತಾದ್ಯನೇಕ ಸೂಕ್ತಗಳಿಂ ಪ್ರತ್ಯೇಕಪ್ರತ್ಯೇಕವಾಗಿ ಸಹಸ್ರ ಸಂಖ್ಯೆಯಿಂ ಬಗೆಬಗೆಯಾದ ಪೂಜಾತಿಗಳೆಷ್ಟವೆಯೊ ಅವೆಲ್ಲವಂ ಚೆನ್ನಾದಿಂ ಮಾಡಿಸಿ ಪತ್ತುದಿನ

ಪೂಜಿಸಿ ದಿನದಿನದೊಳ್ ನಾನಾವಿಧವ್ಯಂಜನೋಪೇತಮಾದ ಷಡ್ರಸಾನ್ನಮಂ ನಿವೇದಿಸಿ ದೊಡೆ ನಾರಾಯಣಂ ಸಂತೋಷಿಸುವನೆನಲ್ ಧರ್ಮಕೇತುವುಂ ಅತಿವಿಶ್ವಾಸದಿಂ ಶತಪತ್ರಸಹಸ್ರಪತ್ರಗಳೆನಿಸ ಕುಶೇಶಯಂಗಳಂ ಕಮಲಂಗಳಂ ಕನ್ನೈದಿಲೆಗಳಂ ಸಂಪಿಗೆ ಸೇವಂತಿ ಮಲ್ಲಿಗೆ ಮರುಗ ಜಾಜಿಪಾದರಿಸುರಹೊನ್ನೆ ಪಾರಿಜಾತ ಸೌಗಂಧಿಕ ಮೊಲ್ಲೆ ಇರುವಂತಿ ಪಚ್ಚೆಮರುಗ ದವನಮೊದಲಾದ ಪೂಜಾತಿಗಳಂ ಸಾಸಿರಸಂಖ್ಯೆಯಿಂ ಕೊಂಡಣದಿಂ ನಾನಾ ನವರತ್ನಗಳಿಂ ಪೋಣಿಸಿದ ಚೆನ್ನದ ಪೂಮಾಲೆಗಳಂ ಕಟ್ಟಿಸಿ ಅವುಗಳಿಂ ಯದುಗಿರಿ ನಾರಾಯಣನಂ ಪತ್ತೆಗಂ ಅರ್ಚಿಸಿ ಸಾಸಿರ ಭಾರಪ್ರಮಾಣಮಾದ ಮಹಾನಿವೇದನಮಂ ಮಾಡಿ ಧನ್ಯನಾದೆನೆಂದೆಣಿಸಿ ಅನೇಕ ಭೂಸುರರೊಡನೆ ಸತ್ಕಥಾಲಾಪದಿಂ ಉಪ್ಪರಿಗೆಯೊಳಿರುತಿರ್ದ್ದಂ. ಅನಿತರೊಳ್ ಯಥಾಲಾಭರೆಂಬ ಒಬ್ಬ ಬ್ರಾಹ್ಮಣೋತ್ತಮರ್ ನಾರಾಯಣಾದ್ರಿಗೆ ಮೂರುಯೋಜನದೊಳೊಂದು ವಾಸಭವನದೊಳಿರ್ದ್ದು ಏಕಾದಶೀ ಉಪೋಷಣಮಂ ಮಾಡಿ ದ್ವಾದಶಿಯ ಅರುಣೋದಯದೊಳ್ಲಿಂದಲೇ ತಿರುನಾರಾಯಣನಂ ಧ್ಯಾನಿಸಿ ಎಳವೊಳಸಿನ ವನಮಾಲೆಯಂ ಕಟ್ಟಿ ತುಲಸೀದಳಗಳಂ ದೊಡಗೂಡಿದ ಒಂದು ಪುರುಷಗ್ರಾಸಮಾಗುವಷ್ಟು ಶುದ್ಧಾನ್ನಮಂ ನಿವೇದಿಸಿ ಇದು ನಾರಾಯಣನಿಗರ್ಪಿತಮಾಗಲೆಂದು ಪರಮಭಕ್ತಿಯಿಂ ಸಮರ್ಪಿಸಿದಂ ಈ ಸಮಯದೊಳ್ ರತ್ನಾಂಗದನೆಂಬ ಈರ್ವರ್ ಗಂಧರ್ವರ್ ನಾರಾಯಣನಮುಂದೆ ಸೇವಾಗಾನಮಂ ಮಾಡಿ ಸ್ವರ್ಗಾಭಿಮುಖಮಾಗಿ ಪೋಗುವ ಸಮಯದೊಳ್ ಧರ್ಮಕೇತುವುಂ ಕೇಳುತಿರಲ್ ಪರಸ್ಪರಾಲಾಪದೊಳಿಂತೆಂದರ್ “ ಭಕ್ತವತ್ಸಲನಾದ ನಾರಾಯಣಂ ಧರ್ಮಕೇತುವಿನ ಆರಾಧನ ಮನೊಲ್ಲದೆ ಬಡವನಾದರುಂ ಯಥಾಲಾಭಂ ಮಾಡಿದ ಮಾನಸಾರಾಧನಮನಂಗೀಕರಿಸಿದಂ ಮತ್ತಂ ಇದಂ ವ್ಯಕ್ತಪಡಿಸಲೋಸುಗ ಮುಡಿಯೊಳ್ ತುಲಸೀಮಾಲೆಯಂ ಸೂಡಿ ನವರತ್ನವಿಚಿತ್ರಮಾದ ಕನಕ ಪುಷ್ಪಮಾಲೆಯ ನಾದರದಿಂ ಪರಿಹರಿಸಿರುವಂ ,, ಎಂಬಮಾತಂ ಕೇಳ್ದು ಧರ್ಮಕೇತುವುಂ ಥಟ್ಟನೆದ್ದು ಪೋಗಿ ಶ್ರೀನಾರಾಯಣನಂ ಸೇವಿಸಿ ತಾಂ ಸಮರ್ಪಿಸಿದ ರತ್ನಮಾಲೆಯಂ ಚರಣದೊಳರ್ಪಿಸಿದ ಸ್ವರ್ಣಪುಷ್ಪಮಂ ಕಾಣದೆ ತುಲಸೀಮಾಲೆಯುಂ ತುಲಸೀದಳಗಳುಮಾತ್ರಮೇ ಕಂಡತ್ತಿಸಿವಿರ್ಣ್ಣನಾಗಿ ಯಥಾಲಾಭರಿದ್ದೆಡೆಗೆ ಬಂದು ಅವರಿಗೆ ಸಾಷ್ಟಾಂಗವಾಗಿ ದಂಡನಿಕ್ಕಿ ವಿನಯದಿಂ ವಿಜ್ಞಾಪಿಸಿದಂ ಎಲೈ ಮಹಾನುಭಾವನೆ? ಶ್ರೀತಿರುನಾರಾಯಣಂ ನೀಂ ಮಾಡಿದ ಆರಾಧನಮನಂಗೀಕರಿಸಿದಂ ಆಂ ಸಮರ್ಪಿಸಿದುದಂ ಅಂಗೀಕರಿಸಲಿಲ್ಲಂ ಆದುದರಿಂ ನೀಂ ಆವಕ್ರಮದಿಂದಾರಾಧಿಸಿದಿರಿ ಅದನೆನಗೆ ಪೇಳಬೇಕೆನಲ್ ಯಥಾಲಾಭರುಂ ನಿರಹಂಕಾರದಿಂ ಎಲೈ ರಾಜನೆ ನಾಂ ಸ್ವಭಾವದಿಂ ದರಿದ್ರನಾಗಿಯುಂ ಸಂಪಾದಿಸಲಶಕ್ತನಾಗಿರುವೆಂ. ಸಕಲ ಜಗದ್ವ್ಯಾಪಕನಾದ ಭಗವಂತನಂ ಸಂತೋಷ ಪಡಿಸಲೆನ್ನಿಂದೇನಹುದು ? ಆದುದರಿಂದಂ ನಾನೊಂದು ಮಾಡಿದೆನೆಂದುಂ ನನ್ನ ವಸ್ತುವಿದೆಂದುಂ ಅಹಂಕಾರ ಮಮಕಾರಮು ಮನಸಗಿಲ್ಲವೆಂದು, ಪೇಳಲ್ ಧರ್ಮಕೇತುವುಂ ಪುನರ

ವಿಹರಿಪರಿಚರ್ಯಾಪರ ಬದ್ಧಸ್ಪೃಹನಾಗಿ ಎಲೈ ಭೂಸುರೋತ್ತಮನೆ ನಿಷ್ಕಿಂಚನನೆ
ಪುಲ್ಲದಿದ್ದರುಂ! ನೀಂ ಮಾಡಿದುದೆಂತೆನೆ ಅಂತು ಮಹಾತ್ರಮೆನಗೆ ಯಥಾವಸ್ಥಿತವಾಗಿ ಪೇ
ಳ್ವೆನೆನಲ್ ಯಥಾಲಾಭ ರೀತಿಂದರ್ ಒಂದು ತೋಳಶುದ್ಧವಾದ ತುಲಸೀಮಾಲೆಯಂ
ಕಟ್ಟಿ ಒಂದೆರಡು ತುಲಸೀದಳಯುಕ್ತವಾದ ಪುರುಷಗಾತ್ರಮಂ ಶ್ರೀಮದಷ್ಟಾಕ್ಷರ
ದಿಂ ನಿವೇದಿಸಿದೆನಲ್ಲದೆ ಇನ್ನೇನುಂ ನಾನರಿಯೆಂ ನಾನಾವಾಗಳುಂ ನಾರಾಯಣಂಗಿಂತ
ಲುಂ ಇತರ ದೇವತೆಯಂ ಅಷ್ಟಾಕ್ಷರ ಮನುವಿದು ಇನ್ನೊಂದು ಮಾತ್ರಮಂ ಅದನು
ಪದೇಶಿಸುವಾಗಿತ್ತಲ್ಲ, ಶ್ರೀರಾಮಾಚಾರ್ಯರಿಂ ಎಣಿಸಿದವನಲ್ಲ ಆವರುಂ ನೀನಾರ್ತ
ನಾಗಿ ಬಂದಿರುವುದುಂ ಭಗವದಾರಾಧನ ವಿಷಯದೊಳ್ ನಾಂ ಪೇಳುವುದನವಧರಿಸು ಭಗ
ವಂತನಿಗೆ ಒಂದು ಕೈಯಿಂದ ದಂಡನಿಕ್ಕುವುದುಂ ಶಿರೋವೇಷ್ಟನದಿಂ ಆಲಯಕೆ ಪ್ರ
ವೇಶಿಸುವುದುಂ ಭಗವದಾಲಯದೊಳ್ ತೈಲಾಭ್ಯಂಜನಮುಂ ಕೃಷ್ಣಕಂಬಳಿ ಧಾರಣ
ಮುಂ ನಖಕೇಶಂಗಳನುದುರಿಸುವುದು ಮಾಗುವವ ಮೊಜಲಿಡುವುದುಂ ಮಲಗುವು
ದುಂ ತಾಂಬೂಲಮನ್ನಗಿಯುವುದುಂ ಅನಭಿಮುಖವಾಗಿರುವುದುಂ ಪೀಠದೊಳ್ ಕೂ
ಡುವುದುಂ ತತ್ಕಥಾಶ್ರವಣದೊಳ್ ಉದಾಸೀನಮಾಗಿರುವುದುಂ ಅಶುಚಿಯಾಗಿಯುಂ
ಅಸ್ನಾತನಾಗಿಯುಂ ಸಂಧ್ಯಾವಂದನಾದಿಗಳಿಲ್ಲದೆ ಪ್ರವೇಶಿಸುವುದುಂ ದೇವತಾಂತರ ಕು
ಸುಮಗಳಿಂದರ್ಚಿಸುವುದುಂ ಅವುಗಳಂ ಪ್ರಶಂಸಿಸುವುದುಂ ಭಗವನ್ಮುಖಾಂಬುಜದೊಳಿ
ಟ್ಟ ದೃಷ್ಟಿಯಂ ಕಿತ್ತು ಇನ್ನೊಂದು ಕಡೆ ಕೊಳಿಡುವುದುಂ ಪಾಲ್ಲಭ್ಯದಿಂದ ಅಕಾಲ
ದೊಳ್ ಪ್ರವೇಶಿಸಿ ದರ್ಶನಂ ಮಾಡುವುದುಂ ಪಾವುಗೆ ಮೆಟ್ಟಿ ಪೋಪುದುಂ ಸಂಕೀರ್ತನ
ಮಂ ವಿಘ್ನಿದಿಪುದುಂ ಲೌಕಿಕವಾರ್ತೆಗಳಂ ಪೇಳುವುದುಂ ಹರಿಭಕ್ತರಂ ಅವಮತಿಗೆ
ಯ್ವುದುಂ ಬಹುಮತಿ ಸದಿರುವುದುಂ ತದನ್ಯರಂ ಕೊಂಡಾಡುವುದುಂ ಮಾಣವಂ ತು
ಳಿದು ಸ್ನಾನವಮಾಡಿದೆನೆಂದು ಪ್ರವೇಶಿಸುವುದುಂ ನೈವೇದ್ಯಮಂ ನೋಡುವುದುಂ ಸಮ
ರ್ಪಣೀಯವಾದ ಪುಷ್ಪಮಂ ವಾಸನೆಗೊಳ್ವುದುಂ ಪೂಜಾದ್ರವ್ಯಮಂ ನಪಲಪಿಸುವು
ದುಂ ಆಸೆಪಡುವುದುಂ ತಡೆಯಿಲ್ಲದೆ ನುಡಿಯುವುದುಂ, ಕಲಹಮುಂ ಗರ್ವೋಕ್ತಿಯುಂ,
ದುರುಕ್ತಿಯುಂ, ಆರೋಪಿಸಿದ ದೀಪಮಂ ಇನ್ನೊಂದು ಕಡೆಗೊಯ್ಯುವುದುಂ, ತು
ಲಸಿಯುಂ ಅವಮತಿಗೆಯ್ದು ಪುಷ್ಪಗಳಿಂದರ್ಚನೆಯುಂ ಪ್ರತ್ಯಾಸ್ಥಾನವಿಲ್ಲದೆ ಪ್ರಸಾ
ದಮಂ ಸ್ವೀಕರಿಸುವುದುಂ ನಿದ್ರೆಗೆಯ್ವುದುಂ ರಹಸ್ಯ ಕಾರ್ಯಗಳುಂ ಪುತ್ರದಾರಾದಿಗಳ ಚಿಂ
ತೆಯುಂ ಸ್ತ್ರೀಸಂಭಾಷಣಮುಂ ಇದು ಮೊದಲಾದ ಪಲವಿಧಮಾದ ಅಪರಾಧಂಗಳುಂ
ಟಾದೊಡೆ ಆತನ ಪೂಜೆಯಂ ಭಗವಂತನಂಗೀಕರಿಸುವುದಿಲ್ಲವು. ಅಂಥಾ ಭಗವದಪ
ಚಾರದಿಂ ನರಕಪ್ರಾಪ್ತಿಯೇ ಆಗುವುದು ಆದುದರಿಂ ಪೇಳಿದ ದೋಷಂಗಳೆಂದಾದ
ರುಂ ನಿನ್ನೊಳಾದರುಂ ನಿನ್ನ ಪರಿಜನಂಗಳೊಳಾದರುಂ ಇರುವುದು. ಇನ್ನಾದರು ವಿಾ
ಪ್ರಾಗಲ್ಭಭಾವಮಂ ಬಿಟ್ಟು ಭಕ್ತಿಪೂರ್ವಕವಾಗಿ ತುಲಸೀದಳಗಳಿಂದರ್ಚಿಸಿದೊಡೆ ನಿನ್ನ
ಸಪರ್ಯೆಯಂ ಶ್ರೀಪತಿ ಅಂಗೀಕರಿಸುವನೆಂದವಾತೆಂಕೇಳಿ ಆ ರಾಜನುಂ ಅದೇ ಪ್ರಕಾ

ರದಿಂ ನಿಯತವ್ರತನಾಗಿ ತುಲಸೀದಳಗಳಂ ಸಂಗ್ರಹಿಸಿ ಅದರಿಂ ನಾರಾಯಣನನಾರಾ
ಧಿಸಿ ಸರ್ವೋನ್ನತವಾದ ಭಗವದನುಗ್ರಹಕ್ಕೆ ಪಾತ್ರನಾದಂ ಆದುದರಿಂ ಭಗವತ್ಪ್ರೀ
ಣನಕ್ಕೆ ತುಲಸಿಗೆ ಸದೃಶವಾದ ಇನ್ನೊಂದು ಪದಾರ್ಥಮಿಂತು ಪ್ರಕೃಷ್ಟವುದುಮಿಲ್ಲಂ
ಮುಂದೆಪ್ರಕೃಷ್ಟವಹುದುಮಿಲ್ಲಂ ತುಲಸೀವನವಾಸನೆಯುಳ್ಳ ಗಾಳಿಯು ಬೀಸುವವೇಳೆಗೆ
ಳೊಳು ಯಮಭಟರುಗಳು ನಿಲಿಯುವದಿಲ್ಲವು. ತುಲಸಿಯು ವಳವಾದರುಂ ತಾಪಾದ
ರುಂ ಅಚರಲಿಯಾದರುಂ ಕನ್ನಿದಾದರುಂ ಅದರಬೆಯು ಮಣ್ಣಾದರುಂ ಭಗವಂ
ತನಿಗೆ ಪ್ರಿಯವಾಗುವುದು ಇದಾವುದುಮಿಲ್ಲವಿದ್ದರೂ ಚೇತನರ್ ತುಲಸಿಯಂ ಧ್ಯಾನಿ
ಸಿದೊಡಂ ತುಲಸೀನಾಮಮಂ ಗ್ರಹಿಸಿದೊಡಂ ವೈಕುಂಠಮನೈದಿ ಪರವಾಸುದೇವ
ನಂ ಸೇವಿಸುವರ್ ತುಲಸಿಯು ದರ್ಶನ ಸ್ಪರ್ಶನ ಸ್ಮರಣ ಕೀರ್ತನ ಶ್ರವಣಮಾತ್ರ
ಗಳಿಂ ಇಪ್ಪತ್ತೊಂದು ತಲೆಯುವರೆಗಂ ಕುಲಮಂ ಪಾವನವಾಗಿ ಮಾಳ್ಪುದು ತುಲ
ಸಿಯು ಸರ್ವವಸ್ತುಗಳುಂ ಸಮಸ್ತ ದೇವತಾಮಯಮಾಗಿರುವುದು. ತುಲಸೀ ಕಾನ
ನದೊಳಂ ಸಕೀರ್ತನಂ ನಡೆವೆಡೆಯೊಳಂ ಶಂಖಚಕ್ರಗದಾಧರನಾದ ನಾರಾಯಣಂಸ
ದಾಸನ್ನಿಹಿತನಾಗಿರುವಂ ಆದುದರಿಂದೆಲೈ ಪರಾಶರನೇ ನೀನುಂ ನಿಯತಮಾನಸನಾಗಿ
ಮುಖ್ಯವಾಗಿ ತುಲಸೀದಳಗಳಿಂ ಭಗವಂತನನರ್ಚಿಸಿ ಸಿದ್ಧಿಯನೈಯ್ದುವುದು ಮಾತ್ರ
ಮಾತುಲಸಿಯಿಂದದಿಂ ಏಕಾದಶೀ ವ್ರತಮುಂ ಭಗವಂತನಂ ಸಂತೋಷಪಡಿಸುವುದು
ಲೋಕದೊಳ್ ಮನುಜರು ಭಕ್ತಿಪೂರ್ವಕವಾಗಲ್ಲದೆ ಕಾರ್ಯಾಂತರವ್ಯಾಸಂಗದಿಂದಾ
ದರುಂ ಪರಿಹಾಸದೊಳುಪವಾಸಮಿದ್ದರೆ ಅಷ್ಟುಮಾತ್ರದಿಂ ನಾನಾಪಾತಕನಿಗ
ಳಿಂದೂಷಿತವಾದ ನರಕಮುಂ ತಪ್ಪಿಸಿಕೊಳ್ವರ್ ಆಷಾಢಮಾಸಮಾಗಿ ನಾಲ್ಕುಮಾಸಂ
ಗಳೊಳ್ ಶಯನಪರಿವರ್ತನ ಉತ್ಥಾನವೆಂಬ ನಾಲ್ಕು ಏಕಾದಶಿಗಳೊಳ್ ಉಪವಾಸವ್ರ
ತಮಂ ಮಾಡದ ಚೇತನರ್ ಎನಗೆ ಹೃದಯಶಲ್ಯಮೆಂತೆ ಕ್ಲೇಶಮಂ ಕೊಡುವರೆಂದು
ಭಗವಂತಂತಾನೇಪೇಳಿದ ವಾಕ್ಯಮಸ್ತಿದ್ಯಾಪಿ ಇದಂ ಮೀರಿದ ಪಾತಕಿಗಳ್ ಸಕಲ ಕರ್ಮ
ಗಳಿಂ ಬಹಿಷ್ಕೃತರಾಗಿ ಭಗವಂತನಿಗು ಬಾಹ್ಯರಾಗುವರು. ಏಕಾದಶಿಯಂ ಪರಿತ್ಯ
ಜಿಸಿ ಮಾಡುವ ಸಕಲ ಕರ್ಮಗಳುಂ ಬೂದಿಯೊಳಿಕ್ಕಿದ ಆಹುತಿಯಂತೆ ನಿಷ್ಫಲವಾ
ಗುವವು ಏಕಾದಶಿಯಂ ಬಿಡುವುದಂ ಆಚಾರ್ಯರ ಆಜ್ಞೋಲ್ಲಂಘನಂ ಮಾಡುವುದಂ ಶರ
ಣಾಗತರಂ ಘಾತಿಸುವುದಂ ತುಲ್ಯಪಾತಕವೆಂದು ಬಲ್ಲವರ್ ಪೇಳುವರ್ ಆದುದರಿಂದೆ
ಲೈ ಪರಾಶರನೇ ನೀನುಂ ಶುಕ್ಲಪಕ್ಷದೊಳುಂ ಕೃಷ್ಣಪಕ್ಷದೊಳುಂ ಏಕಾದಶೀವ್ರತ
ಮಂಬಿಡದೆ ಉಪವಾಸಮಿದ್ದು ಭಗವಂತನಂ ಸಂತೋಷಪಡಿಸು ಭಗವಚ್ಚರಣಾರ
ವಿಂದ ಸಮರ್ಪಿತವಾದ ತುಲಸೀಗಳ ಮಿಶ್ರಮಾದ ಪಾದತೀರ್ಥಮಂ ಸ್ವೀಕರಿಸಿ
ನಿವೇದಿತ ಪ್ರಸಾದದಿಂದಲೇ ದಿನದಿನದೊಳ್ ಪ್ರಾಣಾಗ್ನಿಹೋತ್ರಮಂ ಮಾಡುವವರೇ ಪರ
ಮವೈಷ್ಣವರಾಗಿರುವರ್. ಎಂಬುದಾಗಿ ಶಾಂಡಿಲ್ಯರ ವಾಕ್ಯಮಂ ಕೇಳಿ ಪರಾಶರನತಿ
ಸಂತೋಷದಿಂ ನಿಯತಮಾನಸನಾಗಿ ಯಥೋಕ್ತವಾಗಿ ಸಕಲ ಧರ್ಮಗಳನನುಷ್ಠಿಸಿ

ಇಲ್ಲಿಯೇ ಶ್ರೀಮನ್ನಾರಾಯಣನಂ ಆರಾಧಿಸಿಕೊಂಡಿರ್ದ್ದರ್ ಇನ್ನು ದತ್ತಾತ್ರೇಯರುಂ ಶಾಂಡಿಲ್ಯರುಂ, ಪರಾಶರರುಂ, ಮೈತ್ರೇಯರುಂ ಸಹವಸತಿಸಿ ಶ್ರೀನಾರಾಯಣನ ಸೇವೆಯಂ ಮಾಡಿಕೊಂಡು ಭಗವತ್ಕಥಾ ಕಾಲಕ್ಷೇಪದೊಳಿರುತ್ತಿರ್ದ್ದರ್.

ಶ್ರೀಃ

## ಹತ್ತನೆಯ ಅಧ್ಯಾಯವು.

ಕಂ॥ ತರುಣೀಮಣಿಯುತಕೇಶಂ । ಸುರಲೋಕಂ ನರಕವಾಗಿ
ತೃಣಮೆ ದ್ರುಹಿಣಪದಂ ॥ ನಿರತಿಶಯಮೆನಿಪ ಹರಿಕಿಂಕರತಾಸಾಂ
ಪ್ರಾಜ್ಯ ಸಾರ್ವಭೌಮಗೆ

ಋಷಿಗಳ್ ಬೆಸಗೊಂಬರು ಎಲೈ ನಾರದನೇ? ನೀವು ಪೇಳಿದ ದಿವ್ಯಕಥೆಗಳಂ ಕೇಳಿ ಎಮಗೆ ಸಂಸಾರದುಃಖವೆಲ್ಲವು ಪೋಗಿ ಪರಮಾನಂದವುಂಟಾದುದು. ಎಷ್ಟು ಅಮೃತಪಾನವಂ ಮಾಡಿದಾಗಲುಂ ಸಂತುಷ್ಟಿಯಾಗದು ಇನ್ನೊಂದು ಕಥೆಯಂ ಕೇಳಲಾಸೆ ಪುಟ್ಟಿರುವುದು. ನಾರಾಯಣ ತೀರ್ಥದೊಳ್ ತಪಸ್ಸಂ ಮಾಡಿ ಮೋಕ್ಷಸಾಮ್ರಾಜ್ಯಮಂ ಸೆಳೆದವರಾರ್? ಆ ಮಹಾನುಭಾವನ ಚರಿತವಂ ಪೇಳಬೇಕೆನಲ್ ನಾರದನಿಂತೆಂದಂ. ಎಲೈ ಋಷಿಗಳೇ ಅತ್ಯಾಶ್ಚರ್ಯಮಾದ ಈ ಭಾಗವತೋತ್ತಮನ ಚರಿತೆಯಂ ವರ್ಣಿಸುವುದರಿಂದೆನ್ನ ನುಡಿಯುಂ ಪಾವನವಾಗುವುದು. ಇದಂ ಆದರದಿಂ ಕೇಳುವುದು ಆಚಾರಪಾಲಕನೆಂದೊಬ್ಬ ಬ್ರಾಹ್ಮಣನುಂ ಚಾರಿತ್ರವರ್ಧಿನಿಯೆಂಬ ಆತನ ಪತ್ನಿಯುಂ ಇರುತ್ತಿರ್ದ್ದರು. ಆ ದಂಪತಿಗಳ್ ಅತಿಪುಣ್ಯಶೀಲರಾಗಿ ಭಗವದಾರಾಧನವೆಂದು ವರ್ಣಾಶ್ರಮಧರ್ಮಂಗಳಂ ಮಿಾರದೆ ಭಗವದಾಜ್ಞಾ ರೂಪವಾದ ವೇದವಿಹಿತ ಕರ್ಮಂಗಳನನುಷ್ಠಿಸುತ್ತಂ ನಿಷಿದ್ಧಕಾರ್ಯದಿಂ ಸರ್ಪಮನಗ್ನಿಯಂ ಪುಲಿಯನುಂ ಕಂಡಂತೆ ಅಂಜಿ ಭಗವದಾರಾಧನವಂ ಮಾಡಿ ತತ್ಪ್ರಸಾದದಿಂ ದೇಹಧಾರಣವಂ ಮಾಡಿಕೊಂಡು ಸ್ವಧರ್ಮದೊಳಿರುತ್ತಿರ್ದ್ದರ್. ಇಂತಿರುವ ದಂಪತಿಗಳ್ಗೆ ಬಹುಕಾಲದವರೆಗೂ ಸಂತಾನವಿಲ್ಲದೆ ವ್ಯಾಕುಲರಾಗಿರಲು ಕಡೆಗಾಲಕೆ ಭಗವದನುಗ್ರಹದಿಂದೊಂದು ಪುತ್ರನಾದನ್. ಆತನುಂ ಬಾಲ್ಯದಿಂದಲುಂ ಶಮದಮಾದಿ ಗುಣಮುಳ್ಳವನಾಗಿಯುಂ ಕಾಮಕ್ರೋಧಾದಿ ಷಡ್ವರ್ಗಮಂ ಜಯಿಸಿ ಸಹಜವಾದ ವಿಷ್ಣುಭಕ್ತಿಯಿಂದೊಡಗೂಡಿ ಸರ್ವಕಾಲದೊಳುಂ ಭಗವದ್ಗುಣಾಯತ್ತವಾದ ಮನಸ್ಸುಳ್ಳವನಾಗಿರ್ದ್ದಂ. ಆದುದರಿಂದಾತನಂ ಸಕಲಜನಗಳುಂ ವಿಷ್ಣುಚಿತ್ತನೆಂದು ಕರೆಯುತ್ತಿರ್ದ್ದರ್ — ಆ ವಿಷ್ಣುಚಿತ್ತನುಂ ಬಾಲಚಂದ್ರನಂತೆ ಬೆಳೆವುತಿರಲ್ ಆಚಾರಪಾಲಕರುಂ ಉಚಿತಕಾಲದೊಳುಪನಯನಾದಿ ಸಂಸ್ಕಾ

ರಗಳಂ ಮಾಡಿ ಸಕಲವೇದಂಗಳಂ ತದಂಗಂಗಳಂ ಶಾಸ್ತ್ರಾಭ್ಯಾಸಮಂ ತಾನೇ ಮಾಡಿಸಿ ಅಧ್ಯಾತ್ಮಶಾಸ್ತ್ರ ಮೆನಿಪ ಜ್ಞಾನಶಾಸ್ತ್ರಮಂ ಸನ್ಮಾರ್ಗ ದೇಶಿಕರೆಂಬಾಚಾರ್ಯರ ಸನ್ನಿಧಿಯೊಳ್ ಮಾಡಿಸಿ ಈ ಕುಮಾರನು ಸಕಲ ವಿದ್ಯಾಪಾರಂಗತನಾದನೆಂದರಿತು ಆತಂಗೆ ವಿವಾಹವಂ ಮಾಡಲ್ ಪ್ರಯತ್ನಿಸುತಿರಲು ವಿಷ್ಣುಚಿತ್ತನದಂತಿಳಿದು ಇಂತೆಂದಂ ಎಲೈ ತಂದೆಯೇ ನಾನು ವಿವಾಹವನಪೇಕ್ಷಿಸುವುದಿಲ್ಲ ಅದರಿಂ ಸಂಸಾರಬಂಧನವತಿ ದೃಢತರವಾಗಿ ಮಕ್ಕಳುಂ ತತ್ಸಂಬಂಧಿಗಳುಂ ನಾನಾವಿಧ ಬಂಧುಗಳುಂ ಅವರವರ ಮನೋರಥಂಗಳ್ ಮೇಲೆಮೇಲೆ ಉದಿಸುವುದುವಾಗಿ ನಿರಂತರದುಃಖಹೇತುವಾಗುವುದು. ಆದುದರಿಂದೆನ್ನಮನಸ್ಸು ಇವುಗಳಿಗೆ ಸೋಲದೆ ಜಗತ್ಪತಿಯಾದ ನಾರಾಯಣನ ಸೇವಾರಸದೊಳಾಸಕ್ತವಾಗಿರುವುದು. ಆದುದರಿಂ ನೀವೆನ್ನೊಳ್ ನಿಜವಾಗಿ ಹಿತ ಮಂಚಿಂತಿಸುವರಾದೊಡೆ ಭಗವತ್ಪ್ರಾಪ್ತ್ಯುಪಾಯ ಮಂ ತೋರುವುದಲ್ಲದೆ ಅಗಾಧವಾದ ಸಂಸಾರಕೂಪದೊಳ್ ಕೈಯಾರತಳ್ಳಬೇಡಿರೆನಲ್ ತಾಯಿತಂದೆಗಳುಂ ಎಲೈಬಾಲಕನೇ ಚಿಕ್ಕಂದಿನೊಳೀ ವಿರಕ್ತಿಯುಚಿತಮಲ್ಲವು. ಎಲ್ಲರಂತೆ ನೀನುಂ ಗೃಹಸ್ಥಾಶ್ರಮವನಂಗೀಕರಿಸಬೇಕೆಂದು ಪೇಳಿ ವಿವಾಹಪ್ರಯತ್ನಮಂ ಬಿಡದಿರಲಾ ವಿಷ್ಣುಚಿತ್ತರುಂ ಮನದೊಳಾಲೋಚಿಸಿ ಸಕಲಮಂಬಿಟ್ಟು ಮುನಿಜನಾವೃತವಾದ ನೈಮಿಶಾರಣ್ಯಮೆಂಬ ತಪೋವನಮನೆಯ್ದಿ ಯಮನಿಯಮಾದ್ಯಷ್ಟಾಂಗಯುಕ್ತಮಾದ ಯೋಗದೊಳಿರ್ದು ಮೋಕ್ಷಪದನಾದ ಪುಂಡರೀಕಾಕ್ಷನ ಧ್ಯಾನದೊಳಿರ್ದನು, ಇಂತಿರಲೊಂದಾನೊಂದು ಸಮಯದೊಳ್ ವಿಕ್ರಮಾಭರಣನೆಂಬರಸಂ ಬೇಟೆಯ ಮಾರ್ಗವಾಗಿಬಂದು ಆವಿಶಾಲಲೋಚನನಾಗಿರ್ಪ ವಿಷ್ಣುಚಿತ್ತರಂ ಕಂಡು ಇವನಾರು ಈ ಬ್ರಾಹ್ಮಣಂ ಬಾಲ್ಯದೊಳೀಉಗ್ರವಾದ ತಪದೊಳ್ ಮನಂಗೊಟ್ಟು ಬೆಳೆವ ಶರೀರಮಂ ಸರಸುತಿರುವ ಮೌಂಜೀಮೇಖಲೆಯುಂ ಕೃಷ್ಣಾಜಿನಮಂ ಧರಿಸುವುದರಿಂ ಬ್ರಹ್ಮಚಾರಿಯೆಂದು ತೋರುವ ಅಭಿಜನ ವಿದ್ಯಾಸಂಪನ್ನನಾದ ಇಂತಪ್ಪವರಂ ದುರ್ಲಭವಾಗಿರುವುದರಿಂ ನೆನ್ನ ಕನ್ನಿಕೆಯ ನೀತಂಗೆ ಕೊಟ್ಟು ವಂಶಾಭಿವೃದ್ಧಿಗೆಯ್ವೆನೆಂದು ಮನದೊಳಾಲೋಚಿಸಿ ಇಂತೆಂದಂ ಎಲೈ ಬ್ರಹ್ಮಚಾರಿಯೆ ನಾಂ ಮನುವಂಶದೊಳುದಿಸಿದರಾಜಂ ಈ ಭೂಮಂಡಲವನಾಳುತಿರುವೆಂ ಎನಗೊಂದತಿ ಸುಂದರಿಯಾದ ಕನ್ನಿಕೆಯಿರುವಳ್ ಅವಳ ಅಸಿತಾಪಾಂಗತರಂಗಿತವಾದ ನೋಟಮುಂತಿರ್ದ್ದಿದಂತಿರುವ ಪುರ್ಬ್ಬಿನಗೆಮೊಗಮುಂ ಕೇದುಟಿಯುಂ ಬಳಿಗುರುಳುಂ ದೇವಲೋಕದ ತರುಣಿಯರಿಗು ಮಿರದು ನಿನ್ನಭಾಗ್ಯೋದಯದಿಂದಾಕೆಗೆ ಪ್ರೌಢಯವ್ವನವಾಗಿ ಕಮಲಮುಕುಳದಂತೆ ಕುಚಯುಗಮಂಕುರಿಸಿರುವುದು ಆ ಕನ್ಯಾರತ್ನಮಂ ನಿನಗೆಕೊಟ್ಟು ಎನ್ನ ರಾಜ್ಯದೊಳರ್ಧ ರಾಜ್ಯಮಂ ಧಾರೆಯೆರೆಯುವೆಂ ಎನಗೆ ಗಂಡುಮಕ್ಕಳಿಲ್ಲವಾಗಿ ನಿನ್ನಂ ಪುತ್ರನಂತೆ ಭಾವಿಸುವೆಂ ಈ ತಪಃಕ್ಲೇಶಮಂ ಬಿಟ್ಟು ನವನವಯವ್ವನೋದಯದಿಂ ದಿನದಿನಕಭಿವೃದ್ಧಿಯಾಗುವ ಕ್ರೀಡಾರಸದೋಳ್ ಸುಖವಾಗಿರುವಿ ಎನಲಾ ವಿಷ್ಣುಚಿತ್ತನುಂ ಪರಬ್ರಹ್ಮಧ್ಯಾನದೊಳಿರ್ದುಂ ಪುಸಿನಗೆನಕ್ಕು

ವಿಕ್ರಮಾಭರಣನೆಂತೆಂದಂ. ಎಲೈ ರಾಜನೇ ನಾಂ ಕ್ಷತ್ರಿಯರ ಪದವಿಯನಪೇ ಕ್ಷಿಸುವನಲ್ಲ ಯತಕಾವ ಕ್ಷತ್ರಿಯರು ಏಕಚ್ಛತ್ರಾಧಿಪತ್ಯದೊಳಿರ್ದು ಕ್ಷಣಮಾತ್ರದಿಂ ರಣ ರಂಗದೊಳ್ ಮಡಿದು ಹದ್ದುಗಳ ರಕ್ಕೆಗಳಿಂ ಛತ್ರದ ನೆರಳೊಳುರುಳುವ ತಲೆಬುರು ಡೆಗಳುಳ್ಳವರಾಗುವರೆಂಬುದಂ ನೀನರಿಯೆಯಾ? ಹಿಂತೆನಿನಗಿಂತಲುಂ ಸಹಸ್ರಾಧಿಕವಾದ ಪರಾಕ್ರಮ ವೈಭವಗಳುಳ್ಳ ಸಗರಪುತ್ರರು ಅರವತ್ತು ಸಾವಿರವರುಂ ಕಪಿಲಬ್ರಹ್ಮ ನಕೋಪಾಗ್ನಿಯಿಂ ಬೆಂದು ಬೂದಿಯಾದುವಂ ಮಾಂಧಾತೃ ಚಕ್ರವರ್ತಿಯುಂ ಲವಣಾ ಸುರನಿಂ ಹತನಾದುದಂ ಹೇಹಯಾಧಿಪತಿಯಾದ ಕಾರ್ತವೀರ್ಯಾರ್ಜುನನುಂ ಭಾರ್ಗವ ನಪರಶ್ವಧದಿಂ ಛಿನ್ನಮಾದ ಸಹಸ್ರಬಾಹುವುಳ್ಳವನಾದನೆಂಬುದಂ ನಹುಷ ಚಕ್ರವರ್ತಿ ಯುಂ ಅತ್ಯುನ್ನತಪದವಾದ ಇಂದ್ರಪದವಿಯನೈದಿ ಅಜಗರವಾಗಿ ಅಧೋಗತಿಯನೈ ದುದಂ ಬಲಿಚಕ್ರವರ್ತಿಯುಂ ವಾಮನಂ ಪಾತಾಳಕ್ಕೆ ಕಳುಹಿದುದಂ ಇನ್ನುಂ ಕ್ಷತ್ರಿಯರ್ ಇಪ್ಪತ್ತೊಂದುಸಲ ಪರಶುಧಾರೆಗೆ ಸಿಲುಕಿ ನಿಜದೇಹರುಧಿರಧಾರೆಯಿಂ ಪಂಚತಟಾಕಂಗ ಳಂ ತುಂಬಿದುದಂ ನೀಂ ಕೇಳಿಲ್ಲವೆ ಆದುದರಿಂದಿಂತಹ ಕ್ಷತ್ರಿಯರ ಪದಮಂ ನಾನೊ ಲ್ಲೆಂ ಮತ್ತಂ ನಿನ್ನ ಕನ್ನಿಕೆಯುಂ ಬಹಳವಾಗಿ ಶ್ಲಾಘಿಸುವೆ. ಆ ಕನ್ನಿಕೆಯೆಂಬುದಾ ವವಸ್ತುವೊ ಅದಂ ನೀನಾಲೋಚಿಸು ಅದು ರಕ್ತಮಾಂಸಗಳಿಂದಲುಂ ಎಲುಬುಗಳಿಂದ ಲುಂ, ಶ್ಲೇಷ್ಮಗಳಿಂದಲುಂ, ನರವುಗಳಿಂದಲುಂ ಕನ್ನೀರುಗಳಿಂದಲುಂ, ಅಮೇಧ್ಯದಿಂದ ಲುಂ, ಮೂತ್ರದಿಂದಲುಂ, ತುಂಬಲ್ಪಟ್ಟ ತೊಗಲಿನ ಚೀಲವೆಂಬುದಂ ಅರಿಯರುಳ್ ಆದುದರಿಂದ ಹೇಯವಾದ ಸ್ತ್ರೀಯುಂ ನಶ್ವರವಾದ ರಾಜ್ಯಮುಮಂ ನಾಂ ಅಪೇಕ್ಷಿಸುವ ನಲ್ಲೆಂ ಶ್ರೀವೈಕುಂಠನಾಥನ ಚರಣಾರವಿಂದದೊಳೆನ್ನ ಮನವಾಸಕ್ತ ಮಾಗಿರುವುದೆ ನೆ ವಿಕ್ರಮಾಭರಣಂ ಲಜ್ಜಾಕ್ರಾಂತನಾಗಿ ತೆರಳಿದಂ ಅನಂತರದೊಳ್ ವಿಷ್ಣುಚಿತ್ತ ರುಂ ಶಾಂತಮಾನಸರಾಗಿ ತಪಸ್ಸನೊಳಿರಲ್ ಇಂದ್ರನತಿಶಂಕಿತನಾಗಿ ಇವರ ತಪೋ ಭಂಗವಂ ಮಾಡಲೆಂದು ಮಂದಾರಮಾಲಿಕೆ ರಂಭೆ ಊರ್ವಶಿ ಮೇನಕೆ ಕಲ್ಯಾಣಕಾ ಮಿನಿ ವಸಂತವಲ್ಲರಿ ವೀಣಾವಿನೋದಿನಿ ತಿಲೋತ್ತಮೆ ಮೊದಲಾದ ಅಪ್ಸರಸ್ತ್ರೀರು ಗಳೊಡನೆ ಮತ್ತಂ ನೂರುಮಂದಿ ಅಪ್ಸರಸ್ತ್ರೀರುಗಳಂ ವಸಂತಮಲಯಾನಿಲಸಹಿತ ನಾದ ಮನ್ಮಥನುಂ ಕಳುಹಲವರೆಲ್ಲರುಂ ಮುನಿಜನಶರಣ್ಯವಾದ ನೈಮಿಶಾರಣ್ಯಮನೆ ಯ್ದಿದರು ಆಗಲಾ ಅಪ್ಸರಸ್ತ್ರೀರುಗಳುಂ ಮದನನ ಸಹಾಯಮಂ ಪಡೆದು ನಾನಾವಿಧ ವಿಭ್ರಮಂಗಳಿಂದಲುಂ ಗೀತನೃತ್ತ ವಾದ್ಯಗಳಿಂ ವಿಷ್ಣುಚಿತ್ತನಮುಂದೆ ನಲಿದು ಆಟವಾ ಡಿಸುತಿರ್ದರ್. ವಸಂತನುಂ ತಾಂ ವಿವರಿಸಿದ ದಿವ್ಯ ಕುಸುಮಪಲ್ಲವಾದಿಗಳಿಂದಲುಂ ಕೋಮಲ ಸಹಕಾರ ಪಲ್ಲವ ಚರ್ವಣದಿಂ ಮದಿಸಿದ ಕೋಕಿಲಾಲಾಪದಿಂದಲುಂ ಮಧು ಗಂಧ ಲುಬ್ಧಮಧುಕರ ಮಧುರ ಝಂಕಾರಂಗಳಿಂದಲುಂ, ಆವನೋದ್ದೇಶಮನಲಂಕರಿ ಸಿದಂ ತತ್ಕಾಲದೊಳ್ ಮನ್ಮಥನುಂ ರತಿಸನಾಥನಾಗಿ ಅರವಿಂದಾದಿ ಕುಸುಮಶರ ಸನ್ನ ದ್ಧನಾಗಿ ಸಂಚರಿಸುತಿರ್ದಂ ಇಷ್ಟಾದರುಂ ವಿಷ್ಣುಚಿತ್ತರುಂ ನಿಸ್ತರಂಗವಾದ ಸಮು

ಕೊಳ ನಿಲ್ಲದೆ ಶೀಘ್ರದಿಂ ಪೋಗೆನಲ್ ಇಂದ್ರನುಂ ಲಜ್ಜಾನಮ್ರನಾಗಿ ದೈನ್ಯಮಂ ತೋರಿ ಅಪ್ಸರಸ್ತ್ರೀಯರುಗಳ ಶಾಪಾವಧಿಯಂ ಯಾಚಿಸಿದಂ ಅವನದೀನತ್ವಮಂ ನೋಡಿ ವಿಷ್ಣುಚಿತ್ತರುಂ ದಯೆಗೊಂಡು ಎಲೈ ಇಂದ್ರನೆ ? ಮೂರುದಿನಂಗಳೆನಗೆ ತಪೋವಿಘ್ನಮಂ ಮಾಡಿದರ್. ಆದುದರಿಂ ಮೂರುವರ್ಷದವಧಿಯೊಳ್ ಸ್ವರೂಪಮಂ ಹೊಂದುವರೆಂದು ಅನುಗ್ರಹಿಸಲಿಂದ್ರನುಂ ಕೃತಾರ್ಥನಾಗಿ ಸ್ವರ್ಗಕೈದಿದಂ. ವಿಷ್ಣುಚಿತ್ತರುಂ ನಿರಂತರಂ ವಿಷ್ಣುವಿನ ಆರಾಧನದೊಳ್ ಮನಂಗೊಟ್ಟು ಮೇರುಪರ್ವತದಂತೆ ಅಚಾಂಚಲ್ಯವಾದ ಧ್ಯಾನಯೋಗದೊಳಿರುತಿರ್ದರ್. ಇಂತಿರಲಿವರಭಾವಶುದ್ಧಿಯುಂ ಪರೀಕ್ಷಿಸುವೆನೆಂದು ಕೈಲಾಸನಾಥನಿದಿರಾಗಿನಿಂದು ಎಲೈ ಬ್ರಹ್ಮಚಾರಿಯೆ ನಿನ್ನವೈರಾಗ್ಯದಿಂದಲುಂ ಭಗವದ್ಭಕ್ತಿಯಿಂದಲುಂ ನಾಂ ಸಂತೋಷಿಸಿದೆಂ. ನಿನಗಾವಾವುದಿಷ್ಟಾರ್ಥಮಪೇಕ್ಷಿತವಾದೊಡಂ ನಾನೀವೆಂ. ಈ ಲೋಕದೈಶ್ವರ್ಯಮನಾದರುಂ ಉತ್ತಮವಾದ ಕೈಲಾಸಪದವನಾದರುಂ ಪ್ರಾರ್ಥಿಸೆನಲ್ ವಿಷ್ಣುಚಿತ್ತರಿಂತೆಂದರ್—ಎಲೈ ವೃಷಭಗಾಹನನೇ? ನಾನು ಸಂಸಾರಿಗಳಂತೆ ಸ್ವಲ್ಪಸುಖಮಂ ಬಗವನಲ್ಲಂ. ಅಪುನರಾವೃತ್ತಿಲಕ್ಷಣವಾದ ಮೋಕ್ಷಮನಪೇಕ್ಷಿಸುವೆಂ. ನೀನಱಿದಿಯಾಗಿ ಬ್ರಹ್ಮಾದಿಗಳೆಲ್ಲರಪದವುಂ ಅಸ್ಥಿರವಾಗಿರುವುದು. ಶಾಶ್ವತವಾದಹರಿಪದವಂ ನಾನಪೇಕ್ಷಿಸುವೆಂ. ಅದಕುಪಾಯಮಂ ನೀಂತಿಳಿಸಿದೊಡೆ ನಿನ್ನೊಳತ್ಯಂತಮುಪಕಾರಸ್ಮೃತಿಯುಳ್ಳವನಾಗಿರುವೆನೆನಲ್ ಮಹೇಶ್ವರನಿಂತೆಂದಂ. ಎಲೈ ಮುನಿಕುಲತಿಲಕನೇ ! ನೀಂ ಮೋಕ್ಷಾರ್ಥಿಯಾದೊಡದಂ ಶ್ರೀನಾರಾಯಣನೇ ಕರುಣಿಸಬೇಕಲ್ಲದೆ ನಾನುಂ ಬ್ರಹ್ಮನುಂ ಮೋಕ್ಷಮಂ ಕೊಡಲಾರೆವು ಬ್ರಹ್ಮಾದಿಸ್ತಂಭಪರ್ಯಂತವಾದ ಲೋಕವೆಲ್ಲವುಂ ಶ್ರಿಯಃಪತಿಗೆ ವಿಧೇಯವಾಗಿ ತದಾಜ್ಞಾನುಸಾರವಾಗಿರುವುದು. ಕರುಣಾರಸನಾದ ನಾರಾಯಣಂ ಸಕಲಚೇತನರ ಪಾಪಂಗಳಂ ಪರಿಹರಿಸಿ ಅವರ ಆಪದ್ವಿಮೋಚನಮಂ ಮಾಡುವಂ ಎನಗೆ ವೃಕಾಸುರನಿಂದ ಸಂಕಟಮಂ ಪರಿಹರಿಸಿದನೆಂತೆಂದೊಡೆ—ವೃಕನೆಂಬದಾನವಂ ಸಕಲಲೋಕಭಯಂಕರನಾಗಿರ್ದುಂ ಎನ್ನಂ ಕುರಿತು ಘೋರವಾದತಪಸ್ಸಿನೊಳಿರ್ದಂ. ಅವನ ತಪಸ್ಸಿಗೆ ನಾಂ ಮೆಚ್ಚಿ ವರಪ್ರದನಾಗಿ ಮುಂದೆ ನಿಲ್ಲಲು ಆದಾನವಂ ನಾನಾರ ತಲೆಯ ಮೇಲೆ ಕೈಯಿಡುವೆನೊ ಅವನ ತಲೆಯು ನೂರುಹೋಳಾಗುವಂತೆ ವರವಂ ಬೇಡಿದಂ. ನಾನು ಮಾತನಕುಟಿಲಹೃದಯಮನರಿಯದೆ ಅವನಿಗಾವರವನಿತ್ತೆಂ. ಮೂರುಸಾರಿ ಶಪಥಪೂರ್ವಕವಾಗಿ ಎನ್ನಿಂ ವರವಂ ಪಡೆದು ಆ ದುಷ್ಟದಾನವಂ ಎನ್ನ ಶಿರದೊಳ್ ಕೈಯಿಡಲ್ಬಂದಂ, ನಾಂ ಭಯದಿಂ ಪೋಡುತಿರಲ್ ಎಲ್ಲಿಯು ಬಿಡದೆ ಬೆನ್ನಟ್ಟುತಿರಲ್ ಮಧ್ಯಮಾರ್ಗದೊಳ್ ಆಪದ್ಬಾಂಧವಂ ಸುಕುಮಾರಸುಂದರ ಬಾಲಮೂರ್ತಿಯಂತಳೆದು ಬಂದು ಆ ದಾನವನಂ ಕುರಿತು ಮಧುರತರಚತುರವಚನಂಗಳಿಂದ ಅವನಂ ಮರುಳುಗೊಳಿಸುತಿಂತೆಂದರ್. ಎಲೈ ಮಹಾಭಾಗ್ಯಶಾಲಿಯಾದಅಸುರೇಂದ್ರನೇ ? ಇದೇನು ಬಹುಸಂಭ್ರಮದಿಂದೋಡುತಿರುವೆ ಸುಕುಮಾರನಾದ ನೀನು ಇಂತಾಯಾಸಪಡುವುದಂ ಕಂಡು

ಎನ್ನ ಮುಂ ನೋಡುದ. ನಿಲ್ಲದಿರ್ದೊಡೆ ನೀಂ ಪೋಗುವಕಾರ್ಯಮೇನು ಅದಂ ಪೇೞ್ ಪೋಪುದೆನಲ್ ಮುಂದಣ ತಿಯತಾದಪ್ಪೈಕಾಸುರನುಂ ಈಶ್ವರನವರಮಂ ಪರೀಕ್ಷಿಸಲ್ಪೋಗುವೆನೆಂದು — ಅದಕ್ಕೆ ಕನಕನಾಟಕಸೂತ್ರಧಾರನಾದ ಭಗವಂತನು ನಟ್ಟಿಯರಾಗಿ ನಕ್ಕು ಕೈಚಪ್ಪಳೆಯಿಕ್ಕಿ ಅಯ್ಯೋ! ಎನ್ನು ಬುದ್ಧಿಶಾಲಿಯಾದಕ್ಕೆ ನೀನು ಅಭಿಷೇಕವನಿಕ್ಕೆ ಮರುಳಾಗುತ್ತಿದ್ದೀಯೆ? ಅವಂ ಯಾವ ಗುಣ ಪುಸಿಯನಾಡುವನೆಂಬುದನರಿಯನೇ? ಇವನ್ನಾದರುಂ ಒಡನೆ ನಿಧಾನವಾಗಡಿಯಿಡು ನಾಂ ಸತ್ಯವಾಗಿ ಪೇಳುವೆಂ. ತನಗಿಂ ದಬಿಷೇಕಂ ನಿನಗೇನು ಕೊಡುವುಲ್ಲ — ಇದಂ ಪರೀಕ್ಷಿಸುವುದಕ್ಕೆ ಇಷ್ಟು ಪ್ರಯಾಸ ಪೇಳುಲೆ? ನಿನ್ನ ಕೈಯ್ಯಂ ನಿನ್ನ ತಲೆಯೊಳಿಟ್ಟು ನೋಡು ಅಥವಾ ನನ್ನ ತಲೆಯೊಳಿಟ್ಟರುಂ ನನಗೆ ಭಯವಿಲ್ಲ ಆದರೆ ನಾಂ ವಾಮಾರ್ಗಸಂಚಾರದಿಂ ಮೈಲಿಗೆಯಾಗಿರುವೆಂ ನೀಂ ತಪಸ್ಸಿನಿಂ ಶುಚಿಯಾಗಿರುವುದರಿಂದ ಎನ್ನ ಮುಟ್ಟಲಾಗದೆಂದು ಪೇಳಲು ಆ ಮಾತಿನ ಚಮತ್ಕಾರದಿಂ ಮೋಹಿತನಾಗಿ ತನ್ನ ತಲೆಯೊಳ್ ಕೈಯನಿಟ್ಟು ಛಿನ್ನಶಿರಸ್ಕನಾಗಿಬಿದ್ದಂ. ಈ ಪ್ರಕಾರವಾಗಿ ನನ್ನ ಆಪತ್ತುಗಳಿಂ ಬಿಡಿಸಿ ರಕ್ಷಿಸಿದಂ. ಇನ್ನು ಮನೇಕವಾದ ಅತ್ಯಾಶ್ಚರ್ಯಕರಮಾದ ಲೀಲೆಗಳಿಂ ಲೋಕರಂಜನಮಂ ಮಾಡುತ್ತಿರುವಂ ಆದುದರಿಂದೆಲೈ ವಿಷ್ಣುಚಿತ್ತನೇ ನೀಂ ಆ ಭಕ್ತರಕ್ಷಕನಾದ ಶ್ರೀಮನ್ನಾರಾಯಣನನ್ನೇ ಭಜಿಸೆಂದು ಪೇಳಿ ವೃಷಭವಾಹನಂ ತೆರಳಿದಂ. ಇಂತು ಪಿತಾಮಹನುಂ ದೇವತೆಗಳೊಡನೆಯ್ದಿ ವರಮಂ ಕೇಳೆನಲ್ ನಿನ್ನಾರಕ್ಷಿಸುವವಕೆ ಸ್ವಾಧೀನವಾಗಿರುವರಾರೋ? ಆ ಕಮಲನಾಭನಂ ಸಾರ್ಥಿಸುವೆಂ. ನಿನ್ನಿಂನಾ ಅನೇಕವಾದ ಬ್ರಹ್ಮರುಗಳ್ ಪುಟ್ಟಿದರ್. ನೀನುವೋರ್ವಂ ಮುಂದೆ ಬಹುಸಲ ಲಕ್ಷಪುಸ್ತಕವೆಂಬು ಸಾಕ್ಷಿ ಅನನ್ಯಾಸಕ್ತಹೃದಯನಾಗಿ ನಾರಾಯಣನಂ ಧ್ಯಾನಿಸುತ್ತಿರ್ದಂ — ಈ ಪ್ರಕಾರಮಿರುತ ಸನ್ಮಾರ್ಗದೇಶಿಕರೆಂಬ ಆಚಾರ್ಯರ್ ಬಂದು ಎಲೈ ಕುಮಾರನೇ! ನಿನ್ನ ಸೌಭಾಗ್ಯದಿಂದಲುಂ ಭಗವತ್ಕೃಪೆಯಿಂದಲುಂ ನಾಂ ಸಂತೋಷಿಸುವೆಂ. ಆದೊಡೆ ದಕ್ಷಿಣದೇಶದೊಳ್ ವೈಕುಂಠವರ್ಧನವೆಂಬ ಸತ್ಕ್ಷೇತ್ರವಿಶೇಷಮಾದೊಂದು ಪುಣ್ಯಕ್ಷೇತ್ರಮಿರುವುದು ಅಲ್ಲಿಗೆ ಪೋಗಿ ತಪಸ್ಸನ್ನಾಚರಿಸಿದೊಡೆ ಸಿದ್ಧಿಯಾಗುವುದೆಂದು ಪೇಳ್ದಂತರ್ಧಾನವಾಗಲ್ ವಿಷ್ಣುಚಿತ್ತರುಂ ವಿಸ್ಮಿತರಾಗಿ ನಾರಾಯಣಾದ್ರಿಯನೆಯ್ದಿ ಯನಕ್ಷೇತ್ರದೊಳಿರುವ ನಾರಾಯಣತೀರ್ಥತೀರದೊಳ್ ತಪಮಿರ್ದರ್ ಈ ಸಮಯದೊಳ್ ಶ್ವೇತದ್ವೀಪನಿವಾಸಿಯಾದ ಭಗವಂತನಸನ್ನಿಧಾನದೊಳ್ ವಿಷ್ಣುಚಿತ್ತರತಪೋವೈಭವಗಳಂ ಮುನಿಜನಂ ಪ್ರಶಂಸಿಸುತ್ತಿರಲ್ ಅದಂ ಕೇಳ್ ಭಕ್ತಾಗ್ರಗಣ್ಯನಾದ ಪ್ರಹ್ಲಾದಂ ಕುತೂಹಲದಿಂ ವಿಷ್ಣುಚಿತ್ತರ ದರ್ಶನಾರ್ಥವಾಗಿಬಂದು ಧ್ಯಾನದಿಂ ನಿಮೀಲಿತಲೋಚನರಾದ ವಿಷ್ಣುಚಿತ್ತರಮುಂದೆ ನಿಂದು ಎಲೈ ಮಹಾನುಭಾವನೇ! ಪರಮಪುರುಷನಗೋಷ್ಠಿಯೊಳ್ ನಿನ್ನ ತಪಃಪ್ರಭಾವಮಂ ಮುನಿಗಳ್ ಪ್ರಶಂಸಿಸುತಿರಲ್ ಕ್ಷೀರಾಬ್ಧಿನಾಥನುಂ ತಲೆಯಂ ತೂಗುತಾಲಿಸುವಂ. ಅದಂ ಕೇಳ್ ಅತಿಕುತೂಹಲದಿಂ ನಿನ್ನಂ ನೋಡಲ್ಬಂದಿರುವೆಂ. ಎನ್ನಂ ಪ್ರಹ್ಲಾದನೆಂದರಿವುದೆನಲ್, ವಿಷ್ಣುಚಿತ್ತನುಂ ಬೇಗನೆದ್ದು

ಸನ್ಮಾನಮಂಕೊಟ್ಟು ಕಳುಹಿಸಿದಂ. ಕೆಲವುಕಾಲಮವರೀರ್ವರುಂ ಸಹವಾಸದೊಳಿರ್ದು ಸತ್ಕಥಾಲಾಪದಿಂ ಕಾಲವಂ ಕಳೆವುತಿರಲ್ ತತ್ಕಾಲದೊಳ್ ಪ್ರಹ್ಲಾದನೊಂದು ನ್ನತಗಿರಿಶೃಂಗದೊಳ್ ನೃಸಿಂಹಮೂರ್ತಿಯಂ ಧ್ಯಾನಸಾಕ್ಷಾತ್ಕಾರಂಮಾಡಿ ಪ್ರತಿಷ್ಠಿಸಿದಂ. ಆ ಪರ್ವತಾಗ್ರಕ್ಕೆ ನರಸಿಂಹಗಿರಿಯೆಂದು ಪ್ರಸಿದ್ಧಿಯಾದುದು. ಅಲ್ಲಿ ಭಕ್ತವತ್ಸಲನಾದ ನೃಸಿಂಹಂ ತನ್ನಸೇವಕರಿಗೆ ಚತುರ್ವಿಧಪುರುಷಾರ್ಥಮಂ ಕೊಡುತಿರ್ಪಂ. ಅನಂತರದೊಳ್ ವಿಷ್ಣುಚಿತ್ತರ ತಪಸ್ಸಿನಿಂತೋಷಿತನಾದಭಗವಂತಂ ಶಂಖಚಕ್ರಗದಾಪಾಣಿಯಾಗಿ ಮಹಾಲಕ್ಷ್ಮಿಯೊಡಗೂಡಿ ಗರುಡವಾಹನಾರೂಢನಾಗಿದರ್ಶನಮಾಡಲು ವಿಷ್ಣುಚಿತ್ತರುಂ ಪರಮಾನಂದಭರಿತರಾಗಿ ಸಾಷ್ಟಾಂಗವೆರಗಿ ಪುಳಕಾಂಚಿತಗಾತ್ರನಾಗಿ ಭಕ್ತಿಪಾರವಶ್ಯದಿಂ ನರ್ತನಾದಿಗಳಂ ನಾನಾವಿದಸ್ತೋತ್ರಂಗಳಂಮಾಡಿ ಮಂತ್ರರತ್ನ ಮೆನಿಪ ಶರಣಾಗತಿಮಂತ್ರದಿಂ ಭಗವಂತನ ಅಡಿದಾವರೆಯಂ ಶರಣಮೆಯ್ದಿಸಾಯುಜ್ಯರೂಪವಾದ ಮೋಕ್ಷಮನೆಯ್ದಿದರ್.

---

ಶ್ರೀಃ

## ಹನ್ನೊಂದನೇ ಅಧ್ಯಾಯವು.

---

ಕಂ॥ ಸರ್ಗ್ಗಕೆಪಡಿಸರ್ಗ್ಗವೆವಾ। ಳ್ಪರ್ಗ್ಗಳನಿಂ ಬಂದಶಾಪದಿಂದಾಮು
ದಕಂ ॥ ಜರ್ಗ್ಗದ ಪಾಪಮದೆಲ್ಲಂ। ಭರ್ಗ್ಗನೆಪರಿದೋಡಿದತ್ತು ತ
ತ್ತೀರ್ಥಂಗಳಿಂ

ಅನಂತರದಲ್ಲಿ ಋಷಿಗಳೆಲ್ಲರುಂ ನಾರದನಂ ಕುರಿತು ಎಲೈಸುರಮುನೀಂದ್ರನೇ! ನೀವುಹೇಳಿದ ವಿಷ್ಣುಚಿತ್ತರ ವೃತ್ತಾಂತಮಂ ಕೇಳಿದಮಾತ್ರದಿಂದ ಎಮ್ಮ ಹೃದಯವು ವಿಷ್ಣುಪದಾಸಕ್ತವಾದುದು. ಜ್ಞಾನನಿಧಿಯಾದ ನಿಮ್ಮಿಂದೆಲ್ಲಮಂ ಕೇಳಿ ಧನ್ಯರಾದೆವು. ಆದೊಡಂ ವಸಿಷ್ಠಪುತ್ರರು ಆ ಯಾದವಗಿರಿಯೊಳ್ ಅಪಾರಘೋರಶಾಪದಿಂ ವಿಮುಕ್ತರಾದರೆಂದು ಶ್ರೀ ನಾರಾಯಣನರುಹಿದಂ. ಆವೃತ್ತಾಂತಮಂ ಮತ್ತಂ ವಿಶೇಷವೃತ್ತಾಂತಂಗಳಂ ಪೇಳಬೇಕೆನಲ್ ನಾರದನಿಂತೆಂದಂ. ಎಲೈ ಋಷಿಗಳೇ! ತ್ರಿಶಂಕುವಿನಯಾಗಪ್ರಕರಣದಲ್ಲಿ ವಿಶ್ವಾಮಿತ್ರಶಾಪದಿಂ ಚಂಡಾಲತ್ವಮನೆಯ್ದಿದ ವಸಿಷ್ಠಪುತ್ರರು ನೂರಾರುಮೆಂದಿನುಂ ಅತಿಪಾಪಾಕ್ರಾಂತರಾಗಿ ಬಹುಕಾಲಮಿರ್ದು ಅವಾವಳಿಗೆಯೊಳುಂ ಆ ಪಾಪವಿಮೋಚನೋಪಾಯಮಂ ಕಾಣದೆ ದುಃಖಿತರಾಗಿರಲು ಆ ಯಾದವಾದ್ರಿಯೊಳ್ ಚತುರ್ವೇದಿಗೆ ಭಾಗವತಾಪಚಾರದಿಂದುಂಟಾದ ಬ್ರಹ್ಮರಾಕ್ಷಸಜನ್ಮ ವಿಮೋಚನವಾದ ವೃತ್ತಾಂತಮಂ ಕೇಳಿ ತಾವುಂ ಅಂಥಾಘಾಪಮಂ ಪರಿಹರಿಸಿಕೊ

ಶ್ರೈವೆಂದೆಣಿಸಿ ಯಾದವಾದ್ರಿಯ ಸಮೀಪದೊಳ್ ಮಾರ್ಗಸ್ಥರಾದ ವೈಷ್ಣವರ ಪಾದ
ಧೂಳಿಯು ವಾಯುಪ್ರೇರಿತವಾಗಿ ಬರುವೆಡೆಗಳೊಳಿರ್ದುಂ ಪರ್ವತ ಪ್ರಾಂತಗಳೊಳಿ
ರುವ ತೀರ್ಥಗಳಂ ಸೇವಿಸುತಂ ಪಲಾಶತೀರ್ಥದ ತೀರದೊಳ್ ಕೆಲವುಕಾಲಂ ವಾಸ
ಮಾಗಿರ್ದರು. ಈಪ್ರಕಾರದೊಳ್ ಭಗವದ್ಭಕ್ತರ ಪಾದಧೂಳೀ ಮಹಿಮೆಯಿಂದಲುಂ
ಅವರುಗಳಿಂ ಪರಿಗೃಹೀತವಾದ ತೀರ್ಥಮಹಿಮೆಗಳಿಂದಲುಂ ಅವರಿಗೆ ಪಾಪನಿವೃತ್ತಿ
ಯಾಗಿ ಉತ್ಕೃಷ್ಟವಾದ ಪದವಿಗೈದುವುದಕೆ ಕಾರಣವಾದುದು. ತತ್‌ಕ್ಷಣದಿಂದಲೇ
ಚಂಡಾಳತ್ವಮಂಬಿಟ್ಟು ಬ್ರಾಹ್ಮಣ ಧರ್ಮದೊಳಿರ್ದು ಅಷ್ಟತೀರ್ಥಂಗಳೊಳುಂ ಕ್ರ
ಮವಾಗಿ ಸ್ನಾನಮಂಮಾಡಿ ಅತ್ಯಂತ ಉಪವಾಸಾದಿವ್ರತನಿಯಮದೊಳಿರ್ದು ಪಲಾಶ
ತೀರ್ಥದೊಳ್ ಇಪ್ಪತ್ತೊಂದು ದಿನದವರಿಗೆ ಸ್ನಾನಮಂಮಾಡಿ ಅನಂತರದಲ್ಲಿ ಕಲ್ಯಾಣೀ
ತೀರ್ಥದೊಳುಂ ಸ್ನಾನಮಂಮಾಡಿ ಪರಿಶುದ್ಧ ಹೃದಯರಾಗಿ ಆತೀರ್ಥ ತೀರದೊಳಿ
ರ್ದ ಲೋಮಶ ಮುನೀಶ್ವರನಂ ಕಂಡು ಅತಿಭಕ್ತಿಯಿಂ ನಮಸ್ಕರಿಸಲಾಮುನೀಶ್ವರ
ನತಿಸಂತೋಷದಿಂ ನೀವಿಲ್ಲಿಗೇನುಕಾರಣದಿಂ ಬಂದಿರೆಂದು ಕೇಳಲವರುಂ ತಮ್ಮ ವೃತ್ತಾಂ
ತಂಗಳಂ ನಿವೇದಿಸಲಾ ಲೋಮಶಮುನಿಯುಂ ಎಲೈ ವಸಿಷ್ಠ ಕುಲೋತ್ತಂಸರೇ ಈ
ಕ್ಷೇತ್ರವೆಂಬುದು ಉತ್ಕೃಷ್ಟವಾದುದು. ಇಲ್ಲಿ ಕಾಲಾಂತರದೊಳ್ ಅಂಬರೀಷನೆಂ
ದುಂ, ವಿಕುಕ್ಷಿಯೆಂದುಂ, ಶುಕನೆಂದುಂ, ಪುಂಡರೀಕನೆಂದುಂ, ರುಕ್ಮಾಂಗದನೆಂದುಂ,
ಐದುಮಂದಿ ಭಾಗವತೋತ್ತಮರು ಅವರುಗಳ ಕಾಲದೊಳ್ ಈ ಜ್ಞಾನಾಶ್ವತ್ಥ ವೃಕ್ಷದ
ದಕ್ಷಿಣ ಭಾಗದೊಳಿದ್ದು ಈ ಕಲ್ಯಾಣೀ ತೀರ್ಥದ ಪೂರ್ವಭಾಗದೊಳಿರುವ ವರಹ
ಮೂರ್ತಿಯ ಉಪಾಸನೆಯಂಮಾಡಿ ಸಿದ್ಧಿಯನೈದಿದರು ಇಲ್ಲಿಯೇ ಜ್ಞಾನವರಾಹ
ಸ್ವಾಮಿಯುಂ ಭೂದೇವಿಗೆ ತತ್ವಂಗಳಂ ಪೇಳಿ ವರಾಹ ಚರಮಶ್ಲೋಕವೆಂಬೆರ
ಡು ಶ್ಲೋಕಮನುಪದೇಶಿಸಿದರು. ಈ ಚರಮಶ್ಲೋಕಮನನುಸಂಧಾನ ಮಾಡುವವ
ರಿಗೆ ಸಾಕ್ಷಾದ್ವರಾಹ ರೂಪಿಯು ಪ್ರತ್ಯಕ್ಷವಾಗಿ ಜ್ಞಾನೋಪದೇಶವಂ ಮಾಡುವರು.
ಈ ಪಂಚಭಾಗವತರೊಳು ಮುಖ್ಯರಾದ ಅಂಬರೀಷಂಗೆ ಇಲ್ಲಿ ಮಾಯಾ ವಾರಾಹ
ಮೂರ್ತಿಯಾದ ಭಗವಂತನು ಶರಣಾಗತಿ ಧರ್ಮದ ತತ್ವಮನರುಪಿದರದೆಂತೆನೆ ಎಲೈ
ಅಂಬರೀಷನೆ ಸಕಲವೇದಂಗಳೊಳು ನ್ಯಾಸವಿದ್ಯೆಯೆನಿಪ ಶರಣಾಗತಿಧರ್ಮವೇ ಉ
ತ್ತಮವಾದುದೆಂದು ಪೇಳಿರುವುದು ಇದಂ ಶರಣಾಗತಿಯೆಂದುಂ, ಪ್ರಪತ್ತಿಯೆಂದೂ,
ಸರ್ವಸಂಗ ಪರಿತ್ಯಾಗವೆಂದುಂ, ನ್ಯಾಸವಿದ್ಯೆಯೆಂದುಂ, ಪೇಳುವರು. ವೇದಾರ್ಥ
ಪ್ರಕಾಶಕವಾದ ಶ್ರೀ ಪಾಂಚರಾತ್ರದೊಳಿದಂ ನಾಂ ವಿಸ್ತರಿಸಿರುವೆಂ. ನಾನೆಂತು
ಸರ್ವದೇವತೆಗಳಿಗುಂ, ಅತಿರಿಕ್ತನಾಗಿರುವೆಂ. ಶ್ರೀದೇವಿಯೆಂತು ಸರ್ವನಾರಿಯ
ರೊಳತಿರಿಕ್ತೆಯಾಗಿರುವಳೋ ? ಅಂತು ಶರಣಾಗತಿಧರ್ಮವೇ ಸಮಸ್ತಧರ್ಮಗಳೊ
ಳುಂ ಉತ್ಕೃಷ್ಟವಾಗಿರುವುದು. ಕರ್ಮಜ್ಞಾನ ನಿಷ್ಠರಾದವರೆಲ್ಲರುಂ ಶರಣಾಗತಿ
ನಿಷ್ಟನ ಕೋಟ್ಯಂಶದೊಳೊಂದು ಕಲಾಮಾತ್ರಕುಮೆಣೆಯಾಗಲಾರರು. ಚೇತನರು

ತವನ್ನು ಆಕಿಂಚನ್ಯವನ್ನು ಮುಂದಿಟ್ಟು ನನ್ನನ್ನೇ ಅತಿವಿಶ್ವಾಸದಿಂ ಭಜಿಸುತ್ತಿರುವುದರಿಂದ ಸಾಧನಾಂತರಗಳಿಗಿಂತಲೂ ಈ ಶರಣಾಗತಿಯಲ್ಲಿ ನನ್ನ ಮನಸ್ಸು ಕರಗುವುದು. ನನ್ನಲ್ಲಿ ಸರ್ವಭರನ್ಯಾಸವಂ ಮಾಡಿದವರು ಸರ್ವಪ್ರಕಾರದಿಂದಲೂ ನಿರ್ಭರರಾಗಿರುವರು. ಅವರಿಗೆ ಈ ಲೋಕದಲ್ಲಿಯಾದರೂ, ಪರಲೋಕದಲ್ಲಿಯಾದರೂ, ನಾನೇ ಭಾರವಾಹಕನಾಗಿರುವೆನು ಎನ್ನಂ ಶರಣವಾಗಿ ಪೊಕ್ಕವರ ಹೃದಯವು ವಾಸಗೃಹವಾಗಿ ನಾಂ ಪೊಕ್ಕಿರುವೆಂ. ಈ ಪ್ರಕಾರವಾಗಿ ವರಾಹರೂಪಿಯಾದ ಭಗವಂತನಿಂದುಪದೇಶಮಂ ಕೈಕೊಂಡು ಭೂದೇವಿ ಕೃತಾರ್ಥಳಾಗಿ ಆ ಶರಣಾಗತಿಧರ್ಮದೊಳಿರುತಿರ್ದಳ್. ಇಂತು ವಿಕುಕ್ಷಿ ಪ್ರಭೃತಿಗಳಾದ ನಾಲ್ವರ ಚರಿತ್ರೆಗಳು, ಆಶ್ಚರ್ಯಕರವಾಗಿಯೂ, ಪಾವನವಾಗಿಯೂ, ಬಹು ವಿಸ್ತಾರವಾಗಿಯೂ ಇರುವುದರಿಂದೀಗ ವಿವರಿಸಲಶಕ್ಯವಾಗಿರುವುದು. ಇದಲ್ಲದೆಯೂ, ಅನೇಕ ಮಹಾತ್ಮರು ಇಂದ್ರಾದಿಕ್ಷೇತ್ರದೊಳಿರ್ದು ಮೋಕ್ಷಾಂಗನಾ ಪರಿಗ್ರಹಮಂ ಮಾಡಿ ನಿರಂತರ ಸುಖದಿಂದಿರುವರು ಆದುದರಿಂ ನೀವುಗಳು ಈ ಮಹಾಕ್ಷೇತ್ರದೊಳ್ ನಿತ್ಯವಾಸಂಗೆಯ್ದು ನಾರಾಯಣನ ಸೇವೆಯಂ ಮಾಡಿ ಕೃತಾರ್ಥರಪ್ಪುದೆಂದು ಲೋಮಶರ ವಾಕ್ಯಮಂ ಕೇಳಿ ವಸಿಷ್ಠರ ಪುತ್ರರೆಲ್ಲರುಂ ಸಂತುಷ್ಟರಾಗಿ ನೀರಾರ್ಯಸ್ಯಾಂತದೊಳ್ ದಿವ್ಯನಂದನವನಮಂ ಸ್ಥಾಪಿಸಿ ಅಲ್ಲಿ ವಾಸಿಸಿದ ಎಳತೊಳಸಿಯ ದಳಗಳಿಂ ನಾರಾಯಣನ ಚರಣಮನರ್ಚಿಸಿ ಪರಮಪದವನೆಯ್ದಿದರು ನಾರದರು ಹೇಳುವರು. ಎಲೈ ಮುನಿಗಳಿರ ಈ ಪ್ರಕಾರದಲ್ಲಿ ಯಾದವಗಿರಿ ಮಾಹಾತ್ಮ್ಯದ ಸಂಕ್ಷೇಪವಾಗಿ ಹಿಂದೆನಡೆದ ವೃತ್ತಾಂತವೆಲ್ಲವ ನರುಹಿದೆ. ಮುಂದೆ ನಡೆವ ಭವಿಷ್ಯಗಳಂ ಹೇಳುವೆ. ಈಗಲಾರಂಭವಾಗಿರುವ ಕಲಿಯು ವೃದ್ಧಿಯನೆಯ್ದಿ ಭೂಮಂಡಲದೊಳ್ ಪಾಷಂಡವಾದಂಗಳ್ ಪ್ರಬಲಿಸಿ ವೇದಮಾರ್ಗವ ಳಿವುದು ಆ ಪಾಷಂಡಿಗಳು ಜಗತ್ಕಾರಣನಾಗಿ ಸರ್ವರಕ್ಷಕನಾದ ಭಗವಂತನೊಳ್ ವಿಶ್ವಾಸವಿಲ್ಲದೆ ಕರ್ಮಂಗಳಂ ಬಿಟ್ಟು ದೇವತಾಂತರಗಳಂ ಸೇವಿಸುವರ್ ಇನ್ನುಂ ಕೆಲವರು ಕೇವಲ ದಾಂಭಿಕರಾಗಿ ಯಜ್ಞದೀಕ್ಷಿತರೆಂದು ಪ್ರಸಿದ್ಧಿಗೊಂಡು ಮಕರಕುಂಡಲಾದಿ ವೇಷಮಾತ್ರದಿಂದ ಲೋಕವಂ ವಂಚಿಸಿ ಧನಪರರಾಗಿ ಪಾಪಕೃತ್ಯವಂ ಮಾಡುವರು. ಕಲಿಮಹಿಮೆಯಿಂದ ಕೆಲವರು ಸನ್ಯಾಸಾಶ್ರಮವೆಂದು ಬಂಧಾಶ್ರಮವ ನಂಗೀಕರಿಸಿ ಆ ಆಶ್ರಮಧರ್ಮಂಗಳೊಳ್ ಅಲ್ಪಮಾದರೂ ಆಚರಿಸದೆ ಭೈಕ್ಷಚರ್ಯಮಂ ಬಿಟ್ಟು ಅಶಿಷ್ಟಪರಿಗೃಹೀತವಾದ ಅನ್ನಾದಿಗಳಂ ಭುಜಿಸಿ ನಗರವಾಸದೊಳಿದ್ದು ವಾಹನಾದಿಗಳಿಂ ಸಂಚರಿಸಿ ರಾಜಭೋಗದೊಳಿರುವರು ಪೂರ್ವಕಾಲದೊಳ್ ಲಕ್ಷ್ಮಣನಿಂದ ಸಂಹೃತನಾದ ಮಾಯಾವಿಯೆಂಬ ಅಸುರನು ಪುನಃ ಕಲಿಯುಗದಲ್ಲಿ ಉದಿಸಿ ಕಲಿಪುರುಷಂಗೆ ಸಹಕಾರಿಯಾಗಿರುವನು. ಕಲಿಯುಗದಲ್ಲಿ ಬ್ರಾಹ್ಮಣರುಗಳುಂ ಸಮಿದಾಧಾನ ವೇದಾಧ್ಯಯನಾದಿಗಳಂ ಬಿಟ್ಟು ಮೌಂಜಿಕ ಬ್ರಹ್ಮಚರ್ಯವನಾಶ್ರಯಿಸುವರು, ಬ್ರಾಹ್ಮಣರುಗಳುಂ ಘೋರಗಳ ಆಜ್ಞಾಧಾರಕರಾಗಿ ಯುದ್ಧಾದಿ ಕಾರ್ಯಗಳಂ ಮಾಡುವರು. ಕ್ಷತ್ರಿ

ರುಡ ವಿಷ್ವಕ್ಸೇನಾದಿಗಳಿಗವಿಶೇಷವಾದ ಐಶ್ವರ್ಯಮನೆಯ್ದಿದರೆಂಬ ನಾರದರ ವಾಕ್ಯಮಂಕೇಳಿ ಋಷಿಗಳೆಲ್ಲರುಂ ಅತ್ಯಾನಂದರಸತರಂಗಿತರಂತೆ ರಂಗರಾಗಿರ್ದರು.

---

ಶ್ರೀಃ

## ಹನ್ನೆರಡನೆಯ ಅಧ್ಯಾಯವು.

---

ವೃ॥ ಪಾತಕ್ರೋದ್ಧತಿಯಿಂಗೆಲ್ದತಿಭರದಿಬರುತ್ತಿರ್ಪ ಭವ್ಯಾತ್ಮ್ಯಶ್ರಾಗೆ। ಯಾತ್ಮಾತಂಗೈಶ್ವರ್ಯಮಂ ಕೊಟ್ಟತಿಥಿಸಖಿಗೆ ಸದ್ಜ್ಞಾನಮಂ ಬೋಧಿಸುತ್ತಂ॥ ಪ್ರೀತಿಪ್ರೋತ್ತುಂಗವಾಗುತ್ತೊಡನೆಬಹವ್ಯಗವ್ಯಾಪ್ತವಂ ಕೊಡಿಕೊಂಡ್ಯ। ಗ್ಯತೆಂದಾ ಯಾದವಾದ್ರೀಶ್ವರನ ಸೊಬಗಿನಿಂ ಸೊಲ್ತು ಸಾನಂದವಿರ್ದ್ದರ್ಕ.

ಅನಂತರದಲ್ಲಿ ವ್ಯಾಸಾದಿ ಮುನಿಗಳೆಲ್ಲರುಂ ನಾರದರೊಡಗೂಡಿ ನೆರೆನೈಮಿಶಾರಣ್ಯದಿಂ ನಾರಾಯಣಾದ್ರಿಗೆ ಅಭಿಮುಖವಾಗಿ ಪ್ರಯಾಣಂಗೆಯ್ದು ಗಂಗಾತೀರಮನೆಯ್ದಿ ಅಲ್ಲಿರ್ದ ನಾವಿಕರ್ ಸಿದ್ಧಪಡಿಸಿದೊಂದು ದೊಡ್ಡನಾವೆಯನೇರಿ ಉತ್ತುಂಗತರಂಗ ಸಂಘಗಳಿಂದಲುಂ, ಘುಳಿಘುಳಿಸುತೇಳ್ವಡಗುವ ಸುಳಿಗಳಿಂದಲುಂ, ಮಕರ ಮತ್ಸ್ಯಕುಳೀರ ತಿಮಿ ತಿಮಿಂಗಿಲಾದಿ ಜಲಚರಂಗಳಿಂದಲುಂ, ಭಯಂಕರವಾದ ಪ್ರವಾಹ ಮಧ್ಯದೊಳ್ ಪೋಗುತಿರಲ್ ಪ್ರಳಯಕಾಲದ ಬಿರುಘಾಳಿಯೆಂಬ ಶಂಕೆಯಂ ಪುಟ್ಟಿಸುವ ಒಂದಾನೊಂದು ಪಶ್ಚಿಮದಿಕ್ಕಿನ ಘಾಳಿಯುಬೀಸಿ ತೆಪ್ಪಮಂ ಪ್ರವಾಹದೊಳ್ ಕೊಂಡೊಯ್ಯುತಿರಲ್ ಋಷಿಗಳೆಲ್ಲರುಂ ಸಂಭ್ರಾಂತಚಿತ್ತರಾಗಿ ತೊಳಲುವ ಕಣ್ಣಿಂ ಸುರಿವ ಕಣ್ಣೀರುಂ ಕಾಂತಿಗುಂದಿದ ಮೊಗಮುಂ ನಡುಗುವ ತೊಡೆಗಳುಂ ಕುಗ್ಗಿದ ಧ್ವನಿಯುಂ ತೊಳಲುವ ನಾಲಿಗೆಯುಳ್ಳವರಾಗಿ ವ್ಯಾಸರ ಮುಖಮಂನೋಡಿ ಯೆಲೈ ಕೃಷ್ಣದ್ವೈಪಾಯನರೆ ನಮಗೆ ಎಂಥಾ ಆಪತ್ತು ಬಂದಿತು ನಾವಿನ್ನು ಯಾದವಾದ್ರಿಯನೆಯ್ದಿ ನಾರಾಯಣನ ಸೇವೆಯಂ ಪಡೆಯುವ ಆಸೆಯೇನೆಂದು ಪೇಳಲು ದ್ವೈಪಾಯನರುಂ ಧ್ಯಾನನಿಮೀಲಿತಾಕ್ಷರಾಗಿ ಈ ಪ್ರಚಂಡವಾಯುವೆಂಬುದು ನಮ್ಮಂ ಪರೀಕ್ಷಿಸುವದಕಾಗಿ ಜಗತ್ಪತಿಯಾದ ಭಗವಂತನು ಮಾಡಿದ ಕಾರ್ಯಮೆಂಬರಿತು ಈ ಪರೀಕ್ಷೆಯಂ ಕೊನೆಗಾಣಿಸುವೆನೆಂದೆಣಿಸಿ ನಾವಿಕರಂ ನೋಡಿ ಎಲೈ ನಾವಿಕರೇ ನೀವು ನಡೆಸುವ ತೆಪ್ಪಮಂ ಬಿಡದೆ ಸರ್ವಪ್ರಯತ್ನದಿಂ ತಡಿಗೆ ನಡಸಿರೆಂದೆರು ಅದಕ್ಕಾ ಕರ್ಣಧಾರರೆಲ್ಲರುಂ ಎಲೈಸ್ವಾಮಿಯೇ ಇಂತಾದ ಬಿರುಘಾಳಿಯಂ ನಾವೆಂದಿಗುಂ ಕಂಡರಿಯೆವು ಆವಾವ ಪ್ರಯತ್ನಗಳುಂ

ನಿರರ್ಥಕವಾಗುವದು ಪ್ರತಿಕ್ಷಣದೊಳಂ ಘಾಳಿಯು ಬಿರುಸಾಗುವದು ನಮ್ಮತೋ ಳ್ಗೆಲ್ಲಮಂ ಸೆಳೆತವು ಯಾವದೋ ದುಃಸಾಯವುಮಂ ನಾವುವೆನೆನಲ್ ವ್ಯಾಸರು ಮುಗುಳಿಂತೆಂದರು ಎಲೈ ನಾವಿಕರೇ ನಿಮ್ಮ ಪ್ರಯತ್ನಗಳಿಂದ ಅಸಾಧ್ಯವಾದೊಡೆ ನಿಮ್ಮ ಕೈಗಳಲ್ಲಿರುವ ಹುಟ್ಟುಜಲ್ಲೆ ಮೊದಲಾದ ತೆಪ್ಪವಂ ನಡೆಸುವ ಸಾಧನಗಳಂ ಗಂಗೆಯಲ್ಲಿಬಿಸಾಡಿರೆಂದು ಪೇಳಲು ಆ ಕರ್ಣಧಾರರುಂ ವ್ಯಾಸರವಾಕ್ಯಮುಂ ನಂಬಿ ಮನದೊಳ್ ಶಂಕಿಸದೆ ಕೈಲಿದ್ದ ಸಾಧನಂಗಳಂ ಪ್ರವಾಹದೊಳ್ ಬಿಸಾಡಿ ಸುಮ್ಮನಾದರು. ಅನಂತರದಲ್ಲಿ ವ್ಯಾಸರುಂ ಪರಮ ಭಕ್ತಿಯಿಂ ಪರಮಪುರುಷನಲ್ಲಿ ಶರಣಾಗತಿಯಂ ಮಾಡಲಾ ನಾರಾಯಣನುಂ ಇವರ ದೃಢಭಕ್ತಿಗೆ ಮೆಚ್ಚಿ ಆ ನಾವೆಗೆ ತಾನೇ ಕರ್ಣಧಾರನಾದಂ ತತ್‌ಕ್ಷಣದೊಳ್ ತೆಪ್ಪವು ಕೂಲಾಂತರವ ಸಡರಲಾ ಮುನಿಗಳೆಲ್ಲರುಂ ಆಶ್ಚರ್ಯರಸಪೂರಿತರಾಗಿ ವ್ಯಾಸರ ಪ್ರಭಾವವಂ ಕೊಂಡಾಡುತಿರಲಾ ಆ ಮುನಿಗಳಂನೋಡಿ ವ್ಯಾಸರಿಂತೆಂದರ್ ಎಲೈ ಮುನಿಶ್ರೇಷ್ಟರೇ ನಮ್ಮಂ ಪರೀಕ್ಷಿಸುವದಕ್ಕೋಸ್ಕರ ಇದು ಭಗವಂತನಿಂದಾದ ಕಾರ್ಯಮಲ್ಲದೆ ಬೇರೊಂದಿಲ್ಲವು. ಆಶ್ರಿತರ ರಕ್ಷಣದೊಳ್ ದೀಕ್ಷಾಬದ್ಧನಾದವಂ ಆಶ್ರಿತರ ಅಳಿವಂ ಸೈರಿಸುವನೆ ಸರ್ವಪ್ರಕಾರದಿಂದಲು ಮವರು ಅಕಿಂಚನರಾಗಿಯುಂ ಅನನ್ಯ ಶರಣರಾಗಿ ತನ್ನನ್ನೇ ಶರಣವಾಗಿ ವರಿಸುವದಂ ನಿರೀಕ್ಷಿಸುತಿರುವನು. ಸಂಸಾರವೆಂಬ ಮಹೋದಧಿಯಂ ದಾಂಟಿಸುವವಗೆ ಒಂದು ನದಿಯಂ ದಾಂಟಿಸುವುದೇನಸಾಧ್ಯವೆ ಎಂದುಹೇಳಿ ನಾವೆಯಿಂದಿಳಿದು ಗಂಗಾನದಿಯೊಳ್ಮಿಂದು ಭಗವದಾಜ್ಞಾ ಕೈಂಕರ್ಯರೂಪವಾದ ನಿತ್ಯಕರ್ಮಂಗಳಂಮಾಡಿ ಸರ್ವಕಾಲದೊಳಂ ಪರಿಶುದ್ಧಮನೋಭಾವದಿಂ ನಾರಾಯಣನಂ ಚಿಂತಿಸುತ ಸರ್ವದಾನದಿಯಂದಾಂಟಿ ಗೋದಾವರಿಯ ತೀರ ಮನೆಯ್ದಿದರು. ಆ ಸಮಯದೊಳಾ ಗೋದಾವರೀ ತೀರದೊಂದಗ್ರಹಾರದೊಳತಿಥಿಪ್ರಿಯನೆಂಬ ಒಬ್ಬ ಧನಿಕಬ್ರಾಹ್ಮಣನುಂ ಉಂಛವೃತ್ತಿಯೆಂಬ ಒಬ್ಬ ಬಡಬ್ರಾಹ್ಮಣನು ಮಿರುವರು ಆ ಉಂಛವೃತ್ತಿ ಎಷ್ಟು ದರಿದ್ರನಾದೊಡಂ ವಿಷ್ಣುಭಕ್ತಿ ಪರಾಯಣನಾಗಿರುವನು ಇಂತಿರಲಾ ಅತಿಥಿಪ್ರಿಯನುಂ ಈ ಋಷಿಗಳೆಲ್ಲರಂ ಕಂಡು ಬಹಳ ಸಂತೋಷದಿಂ ನೀವೆನ್ನಮನೆಯೊಳ್ ಭೋಜನಂಗೆಯ್ಯಲ್ ಬಿಜಮಾಡಲ್ವೇಕೆಂದು ಪ್ರಾರ್ಥಿಸಲು ಆ ಋಷಿಗಳೆಲ್ಲರುಂ ನೀಂ ವಿಷ್ಣುಭಕ್ತನಲ್ಲದುದರಿಂ ನಿನ್ನ ಗೃಹದೊಳ್ ನಾವು ಭೋಜನಂಗೆಯ್ಯಲಾರೆವು ನಮಗೆ ಭಗವದ್ಭಕ್ತರ ಸಂಬಂಧಿ ಸಂಬಂಧಿ ಸಂಬಂಧಿಗಳಾದರುಂ ಬಂಧುಗಳಾಗಿರುವರು ಹಾಗಿಲ್ಲದವರು ನಮಗೆ ಬಂಧುಗಳಲ್ಲವು ಕ್ಷೀರಾದಿ ತರುಮೂಲಾದಿ ವಿಷಪದಾರ್ಥಗಳನಾದರುಂ ಭುಜಿಸಿದೊಡೆ ದೇಹಮಾತ್ರಮೇ ನಶಿಸುವುದು ವಿಷ್ಣುಭಕ್ತಿ ವಿಹೀನರ ಅನ್ನವಂ ಭುಜಿಸಿದರೆ ದೇಹವುಂ ದೇಹಿಯು ಮೆರಡುಂ ಕೆಡುವುದು ವಿಷ್ಣು ನಿವೇದಿತಮಲ್ಲದ ಅನ್ನವಂ ಭುಜಿಸುವದಕಿಂತಲುಂ ಉಪೋಷಣದೊಳಿದ್ದು ದೇಹತ್ಯಾಗವಂ ಮಾಡುವದೇಲೇಸೆಂದು ಆತನಂ ಧಿಕ್ಕರಿಸಿ ಉಂಛವೃತ್ತಿಯ ಗೃಹವಂ ತವಕಾಗಿ ಪ್ರವೇಶಿಸಿದರು. ಆಗಳಾ ಅತಿಥಿಪ್ರಿಯನುಂ ತಲೆಗೆಳದ ಗರ್ವ

ನೀವು ಎಲೈ ಸ್ವಾಮಿಯೆ? ಶಾಸ್ತ್ರೋಕ್ತವಾಗೆನ್ನನುದ್ವಾಹಿಸಿ ಎನ್ನೊಡಗೂಡಿ ಗೃಹಸ್ಥಧರ್ಮದೊಳಗಿರುವನಿಮಗೆ ನಿತ್ಯಬ್ರಹ್ಮಚರ್ಯಮೆಂತುಳಿವುದು ಮತ್ತಂ ನಾನಿತ್ತ ಅನ್ನಮಂ ಎನ್ನ ಮುಂದೆ ತಿಂದು ತೇಗಿದ ವಿಶ್ವಾಮಿತ್ರಗೆ ನಿತ್ಯೋಪವಾಸ ವ್ರತಮೆಂತಾಗುವದು ಪ್ರತ್ಯಕ್ಷ ವಿರುದ್ಧವಾದೀ ವಚನಂ ಸತ್ಯವಾದುದೆಂತು ? ಈ ವಾಕ್ಯದಿಂ ನದಿಯೊಳಕೊಡ ಮಾರ್ಗವಿತ್ತುದರಿಂ ಪರಮಾಶ್ಚರ್ಯಮಾಗಿರುವುದು, ಈ ಸಂದೇಹಮಂ ಪರಿಹರಿಸಬೇಕೆನಲ್ ಅರುಂಧತೀ ಜಾನಿಯಿಂತೆಂದಂ. ಎಲೆ ಅರುಂಧತಿಯೆ ಕೇಳು ನಾಂ ಸ್ವದಾರನಿರತನಾಗಿರುವೆಂ ಪರಸ್ತ್ರೀಯರಂ ತ್ರಿಕರಣಗಳಿಂದಲುಂ ಪರಿಗ್ರಹಿಸುವನಲ್ಲಂ ಮತ್ತಂ ನಿನ್ನನುಂ ಕಾಲಮನರಿತು ಉಚಿತಕಾಲದೊಳ್ ಧರ್ಮದಿಂ ಪರಿಗ್ರಹಿಸುವೆನಲ್ಲದೆ ಕಾಮವೃತ್ತಿಯಿಂ ಪರಿಗ್ರಹಿಸುವನಲ್ಲ ಆದುದರಿಂದೆನಗೆ ನಿತ್ಯಬ್ರಹ್ಮಚರ್ಯವ್ರತವುಳಿವುದಿಲ್ಲವು ಆ ವಿಶ್ವಾಮಿತ್ರನುಂ ವಾಸುದೇವನೊಳ್ ಪರಮಭಕ್ತಿಯುಕ್ತನಾಗಿ ಜಾತಿದೋಷಮುಂ, ಆಶ್ರಯದೋಷಮುಂ, ನಿಮಿತ್ತ ದೋಷಮುಮೆಂಬ ತ್ರಿವಿಧ ದೋಷಮುಮಿಲ್ಲದೆ ಪಾವನವಾದ ಪ್ರಸಾದಮಂ ಕಮಲಾರಮಣಂಗೆ ಆರೋಗಣೆಯಂ ಮಾಡಿ ತತ್ಪ್ರಸಾದಮಂ ಶಾಸ್ತ್ರದೊಳ್ನಿಷಿದ್ಧಮಾದ ಕಾಲಂಗಳೊಳ್ ಗೋವಿಂದನಾಮ ಸಂಕೀರ್ತನಪೂರ್ವಕವಾಗಿ ಭುಜಿಸುವರು. ಆದುದರಿಂ ವಿಶ್ವಾಮಿತ್ರರಿಗಂ, ನಿತ್ಯೋಪವಾಸವ್ರತಮುಳಿವುದು ಎಂದು ಪತಿವಚನಮಂ ಕೇಳಿ ಅರುಂಧತಿಯು ಅತಿಸಂತುಷ್ಟಚಿತ್ತೆಯಾದಳು. ಆವುದರಿಂದೆಲೈ ಅತಿಥಿಪ್ರಿಯನೆ ನಿನ್ನ ಮನೆಯೊಳ್ ಭೋಜನಂಗೆಯ್ವುದನುಚಿತಮಲ್ಲವೆ ಉಂಛವೃತ್ತಿಯ ಮನೆಯೊಳ್ ವಿಷ್ಣುನಿವೇದಿತ ಪ್ರಸಾದವಾದುದಂ ನಮಗುದ್ದೇಶ್ಯಮಾದುದೆಂದು ವಿಶ್ವಾಮಿತ್ರರ ವಾಕ್ಯಮಂ ಕೇಳಿ ಅತಿಥಿಪ್ರಿಯನುಂ ಅತ್ಯಂತ ವಿನಯಾನತನಾಗಿ ಎಲೈ ಕೌಶಿಕಾತ್ಮಜನೆ ನಿಮ್ಮ ಈ ಉಪದೇಶದಿಂ ನಾಂ ಕೃತಾರ್ಥನಾದೆನು ಎಂದುಪೇಳಿ ತದಾದಿಯಾಗಿ ಸತ್ತ್ವೋತ್ತರಮಾದ ಬುದ್ಧಿಯಿಂದೊಡಗೂಡಿ ನಿಖಿಲ ಜಗನ್ನಾಯಕನಾದ ನಾರಾಯಣನೊಳ್ ಪರಮಭಕ್ತಿಯಂ ಮಾಡಿದನು. ಆಸಮಯದೊಳ್ ಗೋದಾವರೀತಟವನದೊಳಿರ್ದ ಹರಿಣಗಳುಂ ಸಾರಂಗಗಳು ಮಹಾಋಷಿಗಳಂನೋಡಿ ಸಂತೋಷಮಂ ತಳೆದು ಇವರೊಡಗೂಡಿ ಬರುತಿರ್ದುವು ಈ ಋಷಿಗಳುಂ ಆ ಸಾಧುಮೃಗಗಳ ಹಿಂಡುಗಳಂ ನೋಡಿ ದಯಾರ್ದ್ರಹೃದಯರಾಗಿ ಸಂತೋಷಪಡುತಿರ್ದರು ಪರಮಸಾತ್ವಿಕರಾದ ವೈಷ್ಣವರ ದರ್ಶನ ಸುಕೃತದಿಂದಲೇ ಅಜ್ಞಾನಿ ಜಂತುಗಳಾದ ಹರಿಣಗಳಿಗೂ ಕೂಡ ಹೃದಯಪ್ರಸಾದಮುಂಟಾಗುವದು ಅವುಗಳ ಭಾಗ್ಯೋದಯ ಮಾಗಿರುವುದು. ಈ ಪ್ರಕಾರದಿಂ ಹರಿಲೀಲಾಕುತೂಹಲಾಕ್ರಾಂತಚಿತ್ತರಾಗಿರುವ ಮುನಿಗಳೆಲ್ಲರೂ ಕೃಷ್ಣಾನದಿಯಂ ಹೊಂದಿರುವ ಸಮಯದೊಳ್ ಕೃಷ್ಣಾತೀರವಾಸಿಯಾದ ನೀರಧ್ವಜನೆಂಬ ಧನಿಕಶ್ರೇಷ್ಠಿಯೋರ್ವಂ ಈ ಋಷಿಗಳಂ ನೋಡಿ ಅತ್ಯಂತ ಭಕ್ತಿಯಿಂ ಇವರನುಪಚರಿಸಿ ಅನರ್ಘ್ಯವಾದ ರತ್ನಾಭರಣಗಳಂ ಮುಕ್ತಾಹಾರಗಳಂ ಅಮೂಲ್ಯವಾದ ಕನಕಕೌಶೇಯಂಗಳಂ [illegible]

ಸಿತಸಂಸ್ಕೃತವಪ್ಪ ದ್ರವ್ಯಗಳಂ ಸಮರ್ಪಿಸಲಾ ಸ್ವರ್ಗಾವಳಿಯಂ ಶ್ರೀ ನಾರಾಯಣಸ್ವಾಮಿಯ ಪ್ರಸಾದವಾಗಿ ಮಾಡಿಸೆಂಬಭಿಸಿವೇಶದಿಂ ಪರಿಗ್ರಹಿಸಿದರು. ಈ ಪ್ರಕಾರವಾಗಿ ಮಹರ್ಷಿಗಳು, ಮಹಾಧನಕನಕ ವಸ್ತ್ರಾಭರಣಾದಿಗಳೊಡನೆ ಪ್ರಯಾಣವಾಗಿ ಬರುವುದನರಿತು ಅನೇಕವಾಗಿ ಪೊಟಬ್ಬರರು ಎಂಟುಸಾವಿರರು ಪ್ರಯಾಣಂಗಳಂ ಬೆನ್ನಟ್ಟಿಬಂದು ಹೊಂಚಿತುವುದಂ ವಿಶ್ವಾಮಿತ್ರಮುನೀಂದ್ರಂ ಜ್ಞಾನದೃಷ್ಟಿಯಿಂದರಿದು ಅವರ್ ಬರುವ ದಿಕ್ಕಿಗೆ ಬಲಗೈಯನೀಡಿ ನಿವಾರಿಸಿದರು ತತ್‌ಕ್ಷಣದೊಳಾ ವಿಶ್ವಾಮಿತ್ರರ ಮಂತ್ರಪ್ರಭಾವದಿಂದ ಪೊಟಬ್ಬರರ್ ತಂತಮ್ಮಾಳನ್ಯೋನ್ಯ ಕಲಹಂಗೆಯ್ದು ಪ್ರಾಸ ಪಟ್ಟಿಶ ಪರಶುತೋಮರ ಮುದ್ಗರಲಗುಡಾದ್ಯಾಯುಧಂಗಳಿಂ ಬಡಿದಾಡಿ ಸೂರಾರುಮಂದಿಯುಂ ನಿರವಶೇಷಮಾಗಿ ಸಾಗಿದರು. ಈ ವೃತ್ತಾಂತಮಂ ತಿಳಿದು ಋಷಿಗಳೆಲ್ಲರುಂ ಆಶ್ಚರ್ಯಪಟ್ಟು ವಿಶ್ವಾಮಿತ್ರರ ಪ್ರಭಾವಂಗಳಿಂ ಪೊಗಳುತ್ತ ಬರುತಿರ್ದ್ದರು. ಈ ಪ್ರಕಾರವಾಗಿ ಬರುತ್ತ ಬರುತ್ತ ಉತ್ತುಂಗ ಶೃಂಗಗಣ ಸಂಗತವಾಗಿಯುಂ, ಶುಕಶಾರಿಕಾದಿ ನಾನಾವಿಧ ವಿಹಂಗಮಕುಲ ಸಂಕುಲವಾದ ಪಕ್ವಫಲ ನಿಚುಳ ರಸಾಲ ತಾಲಹಿಂತಾಲ ತಮಾಲ ಕೃತಮಾಲಾ ಶೋಕವನಸ ಪಾಟಲ ಚಂಪಕಾದಿ ತರುಬೃಂದಸಮಾಕೀರ್ಣವಾಗಿಯುಂ, ತಟನಿಕಟ ನಿಪತನ್ನಿರ್ಝರ ಘಭೀರಧ್ವನಿ ಮುಖರಿತ ದಿಶಾಮುಖವಾಗಿಯುಂ, ಅಖಿಲಲೋಕ ಶರಣ್ಯನಾದ ನಾರಾಯಣನಿಂ ದಧಿಷ್ಠಿತವಾಗಿಯುಂ, ಭುವನ ಪಾವನವಾಗಿಯುಂ, ಜಗದ್ವಂದ್ಯವಾಗಿಯುಂ ಮೆರೆವ ನಾರಾಯಣಾದ್ರಿಯಂ ಕಂಡು ಭಗವದ್ಧಾಮ ಮಾದನಂ ಪರಮ ಧರ್ಮದಿಂದರಿತು ಮುನಿಶ್ರೇಷ್ಠರೆಲ್ಲರುಂ ಆ ಪರ್ವತಕ್ಕೆ ನಮಸ್ಕರಿಸಿ ಆನಂದಪೂರಪೂರಿತಾಂತರಂಗರಾಗಿ ನೇತ್ರಾಂಜಲಿಗಳಿಂ ಪಾನವಮಾಡುವಂತೆ ಅತ್ಯಾದರದಿಂ ನೋಡುತ್ತೈತಂದು, ಆ ಪರ್ವತಾಗ್ರದೊಳ್ ದಿವ್ಯಪ್ರಾಕಾರಾವೃತವಾಗಿ, ಸರ್ವೈಶ್ವರ್ಯಸಮೃದ್ಧವಾಗಿಯುಂ, ನಿತ್ಯೋತ್ಸವಪರಂಪರೆಯಿಂದಭಿನವತೋರಣಪತಾಕಾವಿತಾನಪರಿಶೋಭಿತವಾಗಿಯುಂ, ಭೇರೀಮೃದಂಗಮುರಜಪಣವಕಾಹಳೀನಾದಮೇದುರಿತವಾಗಿಯುಂ, ವೇದಘೋಷದಿಂದುದ್ಘೋಷಿತದಶದಿಶಾಂತರಾಳವಾಗಿಯುಂ, ಉಪ್ಪರಿಗೆಯೊಳೊಪ್ಪುವದೀಪಲತೆಗಳಿಂ ಶೋಭಮಾನಮಾಗಿಯುಂ, ಛತ್ರಚಾಮರವ್ಯಜನಾದ್ಯುಪಶೋಭಿತವಾಗಿಯುಂ, ಸ್ವರ್ಗಾದಿಲೋಕಂಗಳ್ಗೆ ಪ್ರತಿಬಿಂಬಮೆಂಬಂತಿರುವ ನಾರಾಯಣನಗರಿಯಂ ಕಂಡು ಹರ್ಷಾತಿಶಯದಿಂದನಿಮಿಷಲೋಚನರಾಗಿ ಕಲ್ಯಾಣತೀರ್ಥದೊಳ್ ಸ್ನಾತರಾಗಿ ಪೌರ್ವಾಹ್ನಿಕಕೃತ್ಯಂಗಳಂ ನೆರವೇರಿಸಿ ಆನಂದಮಯ ದಿವ್ಯವಿಮಾನಾಂತರದೊಳ್ ಸೌಂದರ್ಯಾಮೃತಸಾಗರಮೆಂಬಂತೆ ಲಕ್ಷ್ಮೀದೇವಿಯಿಂ ಲಾಲಿತವಾದ ಪಾದಕಮಲದ್ವಂದ್ವದೊಳೊಪ್ಪುವ ನೂಪುರಾದ್ಯಾಭರಣಗಳಿಂದಲಂಕೃತನಾಗಿಯುಂ, ಪೀತಾಂಬರಪರಿವೇಷ್ಟಿತ ಕಟೀತಟನಾಗಿಯುಂ, ಉದರಮಧ್ಯದೊಳ್ ಆಬದ್ಧ ಕನಕಕಟಿಸೂತ್ರದೊಳಲುಗುವ ಮಣಿಕಿಂಕಿಣಿಗಳಿಂದಲಂಕೃತನಾಗಿಯುಂ, ದಿವ್ಯಕೌಶೇಯಕೋತ್ತರೀಯದಿಂದಲುಂ ಕನಕಮಯ ಯಜ್ಞೋಪವೀತದಿಂದ

ಲುಂ, ಶ್ರೀವತ್ಸವೈಜಯಂತೀ ಕೌಸ್ತುಭವನವಮಾಲಾದಿಗಳಿಂದಲುಂ, ಕೇಯೂರಕಂಕಣಾದ್ಯಾಭರಣಗಳಿಗುಂ ಆಭರಣಪ್ರಾಯವಾಗಿರುವ ಶಂಖಚಕ್ರಗದಾಪದ್ಮಾದ್ಯಾಯುಧಗಳಿಂದಲೂ, ಜಗತ್ರಯಾನಂದಾವಹನಾಗಿಯುಂ, ಮಂದಹಾಸೋಲ್ಲಸದ್ವದನಾರವಿಂದನಾಗಿಯುಂ, ಅಮೃತಧಾರಾವರ್ಷಿ ಕರ್ಣಾಂತಾಯತ ಲೋಚನನಾಗಿಯುಂ ಉಲ್ಲಸದ್ಗಂಡ ಮಂಡಲಾನು ಬಿಂಬಿತಮಕರ ಕುಂಡಲಾ ಲಂಕೃತನಾಗಿಯುಂ ನವರತ್ನ ವಿಚಿತ್ರತರ ಮಹಾರ್ಘ ಮಕುಟಾಲಂಕೃತೋತ್ತಮಾಂಗನಾಗಿಯುಂ, ಕಾಯಕಾಂತಿ ಮಹೋದಧಿ ತರಂಗಸಂಘ ಲಂಘನಾಕ್ಷ ಮತ್ತ್ಯಂಗನಾ ಪಾಂಗಭಿವರ್ಷಿತನಾಗಿಯುಂ, ಮಹಾಲಕ್ಷ್ಮಿಯ ಭಾಗ್ಯದಂತೆಯುಂ, ತ್ರಿಭುವನಾನಂದದ ಗನಿಯಂತೆಯುಂ, ವೇದಂಗಳಿಗೆ ಜೀವಾತುವೆಂಬಂತೆಯುಂ, ಸೂರಿಗಳಂತರಂಗದಾಗರವಾಗಿಯು, ಮೋಕ್ಷಲಕ್ಷ್ಮೀ ಪ್ರಾಸಾದ ಭವನವಾಗಿಯು ವಿಷ್ಣು ನಾರಾಯಣನ ದಿವ್ಯಮೂರ್ತಿಯಂ ಆಪಾದಮೌಳಿ ಪರ್ಯಂತಮಾಗನುಭವಿಸಿ ಸಕಲ ವಿಧದುಃಖಗಳಂ ಕಳೆದು ಪರಿಶುದ್ಧಭಾವದಿಂ ವೀರಧ್ವಜನಿಂ ಕೊಡಲ್ಪಟ್ಟ ಧನಕನಕ ವಸ್ತ್ರಾಭರಣಾದಿಗಳಂ ಸಮರ್ಪಿಸಿ ನಿರಹಂಕಾರಚಿತ್ತರಾಗಿ ಭಗವದನುಭವೈಕಪ್ರವಣರಾಗಿರುತಿರ್ದರು. ತತ್ಕಾಲದೊಳ್ ಶ್ರೀ ನಾರಾಯಣನುಂ ಅತಿಕರುಣಾಸಾರಶೀತಳವಾದ ಅಪಾಂಗಂಗಳಿಂ ಋಷಿಗಳಂ ಕಟಾಕ್ಷಿಸುತಿಂತೆಂದರ್— ಎಲೈ ಋಷಿಗಳಿರಾ ನಿಮ್ಮ ಸೇವಾಗವುದಿಂ ನಾನತಿಪ್ರೀತನಾಗಿರುವೆಂ ನಿಮ್ಮಂತಿರುವ ಭಕ್ತರೇ ಎನಗೆ ಧನವಾಗಿರುವರು ನಾಂ ಕೃಪೆಗೆ ಪರತಂತ್ರಂ ಕೃಪೆಯುಂ ಭಕ್ತರಿಗೆ ಪರತಂತ್ರವಾಗಿರುವುದು. ಭಕ್ತರುಂ ಭಕ್ತಿಗಧೀನರ್ ಭಕ್ತಿಯುಮೆನ್ನ ಅನುಗ್ರಹದಿಂ ಪುಟ್ಟುವುದು ಇಂತು ಭಕ್ತರಿಗೆ ಪರಾಧೀನನಾಗಿರುವುದೆ ಎನ್ನೊಳ್ ಪೆರ್ಮೆಯಲ್ಲದೆ ಮತ್ತೊಂದಿಲ್ಲವು ನಾಂ ನಿಮ್ಮಂ ಬಿಟ್ಟು ವೈಕುಂಠದೊಳಿರಲಾರೆಂ ಇಲ್ಲಿಯಾದೊಡ ಮಾಮು ಪುಷ್ಕರದೊಳಿರ್ದೊಡಂ ನಿಮ್ಮೊಡಗೂಡಿದಲ್ಲದೆ ರಮಿಸೆಂ ಈಗಳುಂ ನೀವುಇಲ್ಲಿಯೇ ಯಥೇಚ್ಛೆಯಾಗಿ ನನ್ನಸೇವೆಯಂ ಮಾಡುತಿರ್ದು ಅನಂತರದೊಳ್ ವೈಕುಂಠದೊಳುಂ ನಿತ್ಯಸೇವೆ ಗೈಯುವಿರಿ ನಿಮ್ಮ ಸಂಬಂಧದಿಂ ವಿಂಧ್ಯಾದ್ರಿಯಿಂ ಬಂದ ಈ ಪುಲ್ಲೆಗಳಿಗುಂ ವಿಶೇಷಮಂ ಕರುಣಿಸುವೆವು ಬ್ರಹ್ಮಾದಿಗಳಿಗುಂ ದುರ್ಲಭಮಾದ ಮೋಕ್ಷಲಕ್ಷ್ಮಿಯುಂ ಚತುಷ್ಪಾಜ್ಜಂತುಗಳಾದ ಈ ಹರಿಣಗಳುಂ ಪೊಂದುವುದು ನಿಮ್ಮ ಸಂಬಂಧದ ವೈಭವಾತಿಶಯಮೆಂಬುದು ಪ್ರಸಿದ್ಧಮಾದುದು ಮತ್ತಮಿಾಕ್ಷೇತ್ರದೊಳ್ ಜ್ಞಾನಾಧಿಕ ನಾದರು ಮಜ್ಞಾನಿಯಾದರುಂ ತಿರ್ಯಕ್ ಸ್ಥಾವರಾದಿಗಳಾದರುಂ ದೇಹಮಂ ತ್ಯಜಿಸಿದೊಡೆ ವೈಕುಂಠಮಂ ಪೊಂದುವರಾದುದರಿಂದಿದಕೆ ವೈಕುಂಠವರ್ಧನ ಕ್ಷೇತ್ರಮೆಂದು ಪೆಸರಾದುದು. ಈ ಕಲ್ಯಾಣೀ ತೀರ್ಥ ತೀರದೊಳ್ ದಾನಂಗಳಂ ಮಾಡುವವರು ಸಹಸ್ರಗುಣವಾಗಿ ತತ್ತದ್ದಾನ ಫಲವನೆಯ್ದುವರು ಈ ಪರ್ವತದಲ್ಲಿ ಒಂದು ಗೋದಾನವನಾದರುಂ ವಿಧಿಪೂರ್ವಕವಾಗಿ ಮಾಡಿದರೆ ಸಹಸ್ರ ಗೋದಾನಫಲವುಂಟಾಗುವದು. ಈ ಕ್ಷೇತ್ರದೊಳ್ ರಿಕ್ತನಾಗಿಯು ಮುಪಶಾಂತನಾಗಿಯುಂ

ವಿಷ್ಣುಭಕ್ತನಾಗಿಯುಮಿರುವ ಬ್ರಾಹ್ಮಣಂಗೆ ಭೂದಾನವಮಾಡಿದವರ್ಗೆಆ ಭೂಮಿಯೊ
ಳೆಷ್ಟು ಪರಮಾಣುಗಳಿರುವುದೊ ಅಷ್ಟು ವರ್ಷಗಳು ಉತ್ತಮಲೋಕವು ದೊರೆಯು
ವದು ಆತಂಗುತ್ತಮಲೊಕ ವಾಸಾನಂತರದೊಳ್ ಶಾಶ್ವತಮಾದ ಮತ್ಸಾಲೊಕ್ಯಮೇ
ಸಿದ್ಧಿಸುವುದು. ಈ ಪರ್ವತದಲ್ಲಿ ವಸ್ತ್ರದಾನ ಅನ್ನದಾನಗಳಂ ಆರುಮಾಡುವರೋ ಅವ
ರು ಬ್ರಹ್ಮಲೋಕವನ್ನು ಹೊಂದುವರಲ್ಲದೆ ಅವರ ವಂಶದೊಳಿಪ್ಪತ್ತೊಂದು ತಲೆಯವ
ರೆಗಂ ಐಶ್ವರ್ಯವಂತರಾಗಿರುವರು. ಈಪರ್ವತದಲ್ಲಿ ಒಂದಕ ಕುಟುಂಬಕ್ಕಾಗುವ
ಷ್ಟು ಧನವಂ ಕೊಡುವವರೇ ಕಲ್ಪಾಂತದೊಳ್ ಕುಬೇರಪದಕ್ಕೆ ಭಾಗಿಗಳಾಗಿರುವರು
ಈ ಪರ್ವತದೊಳ್ ಸುವರ್ಣರಜತ ಕಾಂಸ್ಯಾದಿ ಪಾತ್ರೆಗಳನಾದರುಂ ವಜ್ರವೈಡೂ
ರ್ಯಾದಿ ನವರತ್ನಂಗಳನಾದರುಂ ದಾನವಮಾಡುವವರು ದಿವ್ಯಾಹಾರಾದ್ಯಲಂಕೃತರಾಗಿ
ಸ್ವರ್ಗಸೋಪಾನದೊಳೆಯ್ದುವರು ಕಲ್ಯಾಣೀ ತೀರ್ಥಮಂ ಕುಂಭದೊಳ್ ತುಂಬಿ ಆ
ಉದಕುಂಭದಾನವಂ ಮಾಡಿದರೆ ಅವರ ಪಿತೃಗಳೆಲ್ಲರೂ ಉತ್ತೀರ್ಣರಾಗುವರು ಇಲ್ಲಿ
ತಿಲದಾನವಂ ಮಾಳ್ಪವರ ಪಾಪಗಳು ತಿಲಶಃ ಖಂಡಿತವಾಗಿ ನಶಿಸುವುದು ಇಲ್ಲಿ ವೇದಶಾ
ಸ್ತ್ರಂಗಳಂ ತತ್ವಶಾಸ್ತ್ರಂಗಳಂ ಪ್ರವಚನ ಮಾಡುವವರು ನನ್ನಲೋಕದೊಳಿದ್ದು ತ
ತ್ತತ್ಕಾಲಗಳೊಳಾಚಾರ್ಯ ಪದವಂ ನಿರ್ವಹಿಸುವರು ಈ ಕ್ಷೇತ್ರದೊಳುತ್ತಮವಾದ
ಅಲಂಕೃತ ಕನ್ಯಾದಾನವಂ ಮಾಡುವವರು ಶ್ರೀಭೂಮಿ ನೀಳಾಸಹಿತನಾದ ನನ್ನ ಸಾ
ಯುಜ್ಯಮನೆಯ್ದುವರು ಆದಕಾರಣದಿಂದೆಲೈ ಋಷಿಗಳೇ ನೀವು ಮಿಲ್ಲಿ ನನ್ನಸೇವೆಯಂ
ಮಾಡಿರೆಂದು ಶ್ರೀ ನಾರಾಯಣಂ ಪೇಳಿ ಆನಂದಮಯ ವಿಮಾನದೊಳ್ ವಿರಾಜಿಸುತ್ತಿ
ರ್ದ್ದಂ. ಅನಂತರದೊಳ್ ನಾರದರುಂ ಎಲೈ ಮುನಿಗಳೇ ಯಾದವಾದ್ರಿ ನಾಯಕನಾ
ದ ಭಗವಂತನ ಚರಿತಮೆಲ್ಲವಂ ನಿಮಗರುಹಿದೆನು. ನೀವುಂ ಸಾಕ್ಷಾತ್ಕರಿಸಿ ಅನುಭವಿ
ಸಿದಿರಿ ಮತ್ತಮಿಾ ಯಾದವಗಿರಿ ಮಾಹಾತ್ಮ್ಯಮೆಂಬ ಪುರಾಣಂ ಪುಣ್ಯಕರಮಾಗಿಯುಂ
ಸಕಲ ಪುರುಷಾರ್ಥ ಪ್ರದಮಾಗಿಯು ಮಿರುವುದು ಇದಂ ಭಕ್ತಿಪೂರ್ವಕಮಾಗಿ ಕೇ
ಳುವವರುಂ ಓದುವವರುಂ ಭಗವತ್ಪ್ರೀತಿ ಭಾಜನರಾಗುವರು, ಅವರ ಗೃಹಂಗಳೊಳ್
ಐಶ್ವರ್ಯಮುಂ ಸಂತಾನಮುಂ ಆಯುರಾರೋಗ್ಯಾದಿ ಸಮೃದ್ಧಿಗಳು ಮಭಿವೃದ್ಧಿ ಯಾಗು
ವದು ಈ ಪುರಾಣಮಂ ಪಠಿಸುವವರನುಂ, ಕೇಳುವವರನುಂ, ಭಕ್ತಿಯಿಂದಾರಾಧಿಸುವ
ವರ್ಗೆ ಈ ಸಕಲ ಪುರುಷಾರ್ಥಂಗಳುಂ ಸಿದ್ಧಿಪುದು, ಇಂತೀ ಯಾದವಾದ್ರಿ ನಾಯಕ
ನಾದ ಲಕ್ಷ್ಮೀವಲ್ಲಭಂ ಸಕಲಚೇತನರಿಗುಂ ಸಕಲ ಪುರುಷಾರ್ಥಂಗಳಂ ಕೊಡುತಿರು
ವಂ. ಈ ಯಾದವಾಚಲಾಧೀಶ್ವರನ ಚರಣಾರವಿಂದದೊಳೊಂದು ತುಳಸೀದಳವಂ
ಸಮರ್ಪಿಸಲಾ ಚೇತನರು ಪರಮಪದ ಸರಣಿಯೊಳ್ ನಿತ್ಯಸೂರಿಗಳಿಂ ಪುಷ್ಪವೃಷ್ಟಿ
ಯಂ ಪಡೆವರು ಚರಾಚರಂಗಳಂ ಮೋಕ್ಷಮನೆಯ್ದಿಸಿದ ಶ್ರೀರಾಮನಿಂದಾರಾಧಿತ ನಾದು
ದರಿಂತಿರ್ಯಗ್ಯೋನಿಗತಮಾದ ಹರಿಣಕುಲಮನುಂ ಮುಕ್ತಿ ಪೊಂದಿಸಿದಂತೆ ಸಕಲಚೇತ
ನರಿಗುಂ ಮೋಕ್ಷೈಶ್ವರ್ಯಮನೀವಂ ಈ ಯಾದವಾದ್ರಿಯೊಳ್ ಭಗವಂತನ ಯಾತ್ರಾಸೂ

ಟಕನಾದ ಕಾಲಕ್ಕೆ ನಾರದನೂ ಕೇಳುವರ್ ಅನಂತರಕಾಲದೊಳ್ ವೈಕುಂಠನಾಥನ ವಿಜಯ ಪರಿವರ್ತನೆಯಂ ಕೇಳುವನು ಈ ಯಾದವಾದ್ರಿಯೊಳ್ ನಿಜ ಜಗದ್ರಕ್ಷಾ ದೀಕ್ಷಿತನಾದ ನಾರಾಯಣನ ಮುಖಾರವಿಂದವು ಸಕೃದಾವರ್ತಿಯಾದರೂ ನೋಡಿದವರುಂ ಶ್ರೀವೈಕುಂಠನಾಥನ ಕೃಪೆಯಿಂದ ಪೂರ್ವಕವಾಗಿ ಶ್ರೀವೈಕುಂಠಕೆ ಕರೆದು ಕೊಳ್ವುಂ ಈ ನಾರಾಯಣಾದ್ರಿಯೊಳೊಂದು ಕ್ಷಣವಾದರೂ ವಾಸಮಾಡಿದ ಚೇತನರ್ ಶರೀರಾವಸಾನದೊಳ್ ದಹರಾಕಾಶದಿಂ ಪೊರಟು ಅರ್ಚಿರಾದಿ ಮಾರ್ಗದೊಳೆಯ್ದಿ ಪರಮಪದದೊಳ್ ನಿತ್ಯಸೂರಿಗೋಷ್ಠಿಯೊಳ್ ನಿತ್ಯವಾಸದೊಳಿರುವರು. ಈ ಪ್ರಕಾರದಿಂ ನಾರದರವಾಕ್ಯಮಂ ಕೇಳಿ ಕೆಲವು ಋಷಿಶ್ರೇಷ್ಠರು ಇದೇ ತಮಗೆ ಪರಮಪದವೆಂದೆಣಿಸಿ ಕೈಂಕರ್ಯನಿರತರಾಗಿ ಇಲ್ಲಿಯೇ ನಿತ್ಯವಾಸವ ಮಾಡುತಿರ್ದರು ಮತ್ತಂ ಕೆಲವು ಮುನಿಶ್ರೇಷ್ಠರು ಪರಮ ಪದವನೆಯ್ದಿ ಪರಮ ಪುರುಷಗೋಷ್ಠಿಯೊಳ್ ಶೇಷ ಶೇಷಾಶನ ಸೂರಿಗಳೊಡಗೂಡಿ ನಿತ್ಯಕೈಂಕರ್ಯದೊಳ್ ಆನಂದಿಸುತಿರ್ದರು.




